## ಒಳಾಡಳಿತ ಸಚಿವಾಲಯ

### ಅಧಿಕೃತ ಜ್ಞಾಪನ

**ಸಂಖ್ಯೆ : ಒಇ 199 ಪಿಪಿಇ 2014, ಬೆಂಗಳೂರು, ದಿನಾಂಕ: 23ನೇ ಜುಲೈ, 2014**

**ವಿಷಯ:** ದಿನಾಂಕ: 01–01–2014ರಲ್ಲಿದ್ದಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಕೇಂದ್ರ ಸಹಾಯಕರ ವೃಂದದ ಅಧಿಕಾರಿಗಳ ಜ್ಯೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ.

**ಉಲ್ಲೇಖ:** 1. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ:ಡಿಪಿಎನ್/ಸಿಶಾ/1/03/2014–15, ದಿನಾಂಕ: 23–04–2014.

2. ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಮ ಸಂಖ್ಯೆ: ದಿನಾಂಕ: 11–06–2014.

ದಿನಾಂಕ: 01–01–2014ರಲ್ಲಿದ್ದಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಕೇಂದ್ರ ಸಹಾಯಕರ ವೃಂದದ ಅಧಿಕಾರಿಗಳ ಜ್ಯೇಷ್ಠತಾ ಪಟ್ಟಿಯನ್ನು ಅನುಬಂಧ–1ರಲ್ಲಿ ಪ್ರಕಟಿಸಲಾಗಿದೆ.

**ದೇವೇಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು–ಬಿ).

**ಅನುಬಂಧ–1**

**ದಿನಾಂಕ: 01–01–2014ರಲ್ಲಿದ್ದಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಕೇಂದ್ರ ಸಹಾಯಕರ ವೃಂದದ ಜ್ಯೇಷ್ಠತಾ ಪಟ್ಟಿ**

| ಕ್ರ. ಸಂ. | ಹೆಸರು ಶ್ರೀ / ಶ್ರೀಮತಿ | ನೇರ ನೇಮಕಾತಿ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿ ಜ್ಯೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಎಸ್.ರೇಣುಕಾಚಾರ್ಯ | ಮುಂಬಡ್ತಿ | 08–08–1954 | 01–01–1976 | 04–02–1999 | 04–02–1999 |

**ದೇವೇಂದ್ರಪ್ಪ ಕಟ್ಟಿಮನಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಕಾಫಿಪೋಸ ಮತ್ತು ಅಭಿಯೋಗಗಳು).

**PR: 644**
**S.C.20**

## ಕರ್ನಾಟಕ ವಿಧಾನಸಭೆಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ವಿಸಸ/ಶಾರಶಾ/880/ವಿಸಅಕ/2013, ಬೆಂಗಳೂರು, ದಿನಾಂಕ: 28ನೇ ಜುಲೈ, 2014**

ಸೋಮವಾರ, ದಿನಾಂಕ: 23ನೇ ಜೂನ್, 2014 ರಂದು ಪ್ರಾರಂಭವಾದ ಹದಿನಾಲ್ಕನೇ ವಿಧಾನಸಭೆಯ ನಾಲ್ಕನೇ ಅಧಿವೇಶನವನ್ನು ಸೋಮವಾರ ದಿನಾಂಕ: 28–07–2014 ರಂದು ಅನಿರ್ದಿಷ್ಟ ಕಾಲದವರೆಗೆ ಮುಂದೂಡಲಾಗಿದೆ.

**ಪಿ.ಓಂಪ್ರಕಾಶ,**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ.

## KARNATAKA LEGISLATIVE ASSEMBLY SECRETARIAT

### NOTIFICATION

**No. KLAS/LGA/880/LASS/2013, Bangalore, Dated: 28th July, 2014**

The Meeting of the Fourth Session of the Fourteenth Legislative Assembly, which commenced on Monday, the 23rd June, 2014 is adjourned sine-die on Monday, the 28th July, 2014.

**P.OMPRAKASHA,**
Secretary,
Karnataka Legislative Assembly.

**PR: 645**
**S.C.50**

## ಜಲ ಸಂಪನ್ಮೂಲ ಇಲಾಖೆ

### ಜ್ಞಾಪನಾ ಪತ್ರ

**ಸಂಖ್ಯೆ: ಜಸಂಅ/ಇಎಸ್‌ಕ್ಯೂ-1/ಕ್ರಿ.ಆ./ಭಾರಿ ಗಂಡಾಳು/ಸ.ಸೇ.ವಜಾ/2013-14/4985 ದಿನಾಂಕ: 22.03.14**

**ವಿಷಯ:** ಶ್ರೀ ಗಂಗಪ್ಪ ಪರಮಪ್ಪ ಕೋರ್‍ಯಾಗೋಳ(ಕೋರಿ) ಭಾರಿ ಗಂಡಾಳು ಇವರು ಕ್ರಿಮಿನಲ್ ಆರೋಪದ ಮೇಲೆ ಜೀವಾವಧಿ ಶಿಕ್ಷೆಗೆ ಗುರಿಯಾಗಿರುವುದರಿಂದ ಇವರ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವ ಕುರಿತು.

**ಉಲ್ಲೇಖ:**
1) ಸರ್ಕಾರಿ ಸುತ್ತೋಲೆ ಸಂ: ಸಿಆಸುಇ/9/ಸೇಇವಿ/95, ದಿನಾಂಕ: 26.06.1996.
2) ಮುಖ್ಯ ಇಂಜಿನಿಯರ್, ಕನೀನಿನಿ, ನಿರಾವರಿ (ಉ) ಬೆಳಗಾವಿ, ಇವರ ಆದೇಶ ಸಂಖ್ಯೆ: ಕನೀನಿನಿ/ನೀಉವ/ಇಎಸ್‌ಜಿ/ವಿವ-05/09-10/1593,ದಿನಾಂಕ: 30.06.2009.
3) ವ್ಯವಸ್ಥಾಪಕ ನಿರ್ದೇಶಕರು, ಕನೀನಿನಿ, ಧಾರವಾಡ, ಇವರ ಪತ್ರ ಸಂ: ಕನೀನಿನಿ/ಸಿ-1 ಇ-83/13-14/3358, ದಿ: 16.08.2013
4) ಫಾಸ್ಟ್ ಟ್ರ್ಯಾಕ್ ಕೋರ್ಟ್, ಜಮಖಂಡಿ, ಇವರ ಆದೇಶ ದಿ:26.03.2013 (ಪ್ರಕರಣ ಸಂ.88/2009).
5) ಈ ಕಛೇರಿ ತಿಳುವಳಿಕೆ ಪತ್ರ ಸಂ: ಮುಇಂ/ಜಸಅ/ಇಎಸ್‌ಕ್ಯೂ-2/ ಕೋರ್ಟ್ ತೀರ್ಪು/ಶಿಸ್ತು ಕ್ರಮ/2013-14, ದಿನಾಂಕ: 07.02.2014.
6) ಅಧೀಕ್ಷಕರು, ಕೇಂದ್ರ ಕಾರಾಗೃಹ, ಬೆಳಗಾವಿ, ಇವರ ಪತ್ರ ಸಂ: ಕೇಕಾವಿ/ನ್ಯಾವಿ/2718/13-14, ದಿನಾಂಕ: 19.02.2014. (ಶ್ರೀ ಗಂಗಪ್ಪ ಪರಮಪ್ಪ ಕೋರ್‍ಯಾಗೋಳ(ಕೋರಿ) ಭಾರಿ ಗಂಡಾಳು, ಇವರ ಲಿಖಿತ ಹೇಳಿಕೆ ದಿನಾಂಕ: 13.02.2014).

**ಪ್ರಸ್ತಾವನೆ:**

ಶ್ರೀ ಗಂಗಪ್ಪ ಪರಮಪ್ಪ ಕೋರ್‍ಯಾಗೋಳ(ಕೋರಿ) ಭಾರಿ ಗಂಡಾಳು, ಕನೀನಿನಿ, ಘಟಪ್ರಭಾ ಎಡದಂಡೆ ಕಾಲುವೆ ಉಪ ವಿಭಾಗ ಸಂ.11, ಮುಧೋಳ, ಇವರು ಸದರಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಕ್ರಿಮಿನಲ್ ಪ್ರಕರಣವೊಂದರಲ್ಲಿ ಭಾಗಿಯಾಗಿದ್ದು ಈ ಸಂಬಂಧ ದಿನಾಂಕ: 04.04.2009 ರಲ್ಲಿ ದಸ್ತಗಿರಿಯಾಗಿರುತ್ತಾರೆ. ಪ್ರಯುಕ್ತ ಉಲ್ಲೇಖ (2) ರಲ್ಲಿ ಸದರಿಯವರನ್ನು ಕೆ.ಸಿ.ಎಸ್. ಸಿ.ಸಿ.ಎ ನಿಯಮಗಳು 1957 ರ ನಿಯಮ 10(1)(2) ರ ಪ್ರಕಾರ ದಿನಾಂಕ: 04.04.2009 ರಿಂದ ಅಮಾನತ್ತಿನಲ್ಲಿಡಲಾಗಿತ್ತು. ಉಲ್ಲೇಖ (4) ರಲ್ಲಿ ಫಾಸ್ಟ್ ಟ್ರ್ಯಾಕ್ ಕೋರ್ಟ್ ಜಮಖಂಡಿ ಇವರು ಸದರಿ ಪ್ರಕರಣ ಸಂ: 88/2009ಕ್ಕೆ ಸಂಬಂಧಿಸಿದಂತೆ ದಿನಾಂಕ: 26.03.2013 ರಂದು ನೀಡಿರುವ ತೀರ್ಪಿನಲ್ಲಿ ಇವರ ಮೇಲಿನ ಆರೋಪವು ಸಾಬೀತಾಗಿದ್ದರಿಂದ ಸದರಿಯವರಿಗೆ ಜೀವಾವಧಿ ಶಿಕ್ಷೆ ವಿಧಿಸಲಾಗಿದೆ.

ಉಲ್ಲೇಖ(5) ರ ಈ ಕಛೇರಿ ತಿಳುವಳಿಕೆ ಪತ್ರದಲ್ಲಿ ಸದರಿ ನೌಕರರು ಜೀವಾವಧಿ ಶಿಕ್ಷೆಗೆ ಗುರಿಯಾಗಿ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿರುವುದರಿಂದ ಅವರಿಗೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ಏಕೆ ವಿಧಿಸಬಾರದೆಂಬುದಕ್ಕೆ ವಿವರಣೆಯನ್ನು ಕೇಳಲಾಗಿದೆ. ಆಪಾದಿತ ನೌಕರರು ತಮ್ಮ ಲಿಖಿತ ವಿವರಣೆಯನ್ನು ಉಲ್ಲೇಖ (6) ರ ಪತ್ರದ ಮೂಲಕ ಈ ಕಚೇರಿಗೆ ಕಳುಹಿಸಿದ್ದು ಅದರಲ್ಲಿ ಸದರಿ ತೀರ್ಪಿನ ವಿರುದ್ಧ ಈಗಾಗಲೇ ಉಚ್ಚನ್ಯಾಯಲಯ(ಸಂಚಾರಿ ಪೀಠ), ಧಾರವಾಡ, ಇಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಇನ್ನು ಕೆಲವೇ ತಿಂಗಳಿನಲ್ಲಿ ತಮ್ಮ ಕೇಸ್ ವಿಚಾರಣೆ ನಡೆಯಬಹುದಾಗಿದೆ. ಅಲ್ಲಿಯವರೆಗೆ ನನ್ನ ಸೇವೆಯನ್ನು ವಜಾಗೊಳಿಸದೆ ಕೇವಲ ಅಮಾನತ್ತಿನಲ್ಲಿಡಬೇಕೆಂದು ವಿನಂತಿಸಿರುತ್ತಾರೆ.

ಶ್ರೀ ಗಂಗಪ್ಪ ಪರಮಪ್ಪ ಕೋರ್‍ಯಾಗೋಳ(ಕೋರಿ) ಭಾರಿ ಗಂಡಾಳು, ಕನೀನಿನಿ, ಘಟಪ್ರಭಾ ಎಡದಂಡೆ ಕಾಲುವೆ ಉಪ ವಿಭಾಗ ಸಂ.11, ಮುಧ್ದೋಳ, ಇವರು ಕ್ರಿಮಿನಲ್ ಆರೋಪದ ಮೇಲೆ ಜೀವಾವಧಿ ಶಿಕ್ಷೆಗೆ ಗುರಿಯಾಗಿ ಶಿಕ್ಷೆ ಅನುಭವಿಸಿರುವುದು ಸ್ಪಷ್ಟವಾಗಿ ಕಂಡು ಬಂದಿದೆ. ಕರ್ನಾಟಕ ನಾಗರೀಕ ಸೇವಾ(ಸಿಸಿಎ) ನಿಯಮಗಳು 1957ರ ನಿಯಮ 14(1)ರ ಅನುಸಾರ, ನಿಯಮಗಳು 11, 12 ಮತ್ತು 13 ರಲ್ಲಿ ಏನೇ ಹೇಳಿದ್ದರೂ ಕ್ರಿಮಿನಲ್ ನ್ಯಾಯಾಲಯದಲ್ಲಿ ಕ್ರಿಮಿನಲ್ ಆರೋಪಕ್ಕಾಗಿ ದೋಷಸಿದ್ಧಿಯಾದ ಸರ್ಕಾರಿ ನೌಕರರನ್ನು ಇಲಾಖಾ ವಿಚಾರಣೆಗೆ ಒಳಪಡಿಸದೆಯೆ ಸೇವೆಯಿಂದ ವಜಾ ಮಾಡುವ ಅಥವಾ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಲು ಅವಕಾಶ ಕಲ್ಪಿಸಲಾಗಿದೆ.

ಆದುದರಿಂದ ಶ್ರೀ ಗಂಗಪ್ಪ ಪರಮಪ್ಪ ಕೋರ್‍ಯಾಗೋಳ(ಕೋರಿ) ಭಾರಿ ಗಂಡಾಳು, ಇವರು ಕ್ರಿಮಿನಲ್ ಆರೋಪಕ್ಕೆ ಗುರಿಯಾಗಿ ನ್ಯಾಯಾಲಯವು ಜೀವಾವಧಿ ಶಿಕ್ಷೆ ವಿಧಿಸಿರುವುದರಿಂದ ಉಲ್ಲೇಖ (1) ರ ಸರ್ಕಾರಿ ಸುತ್ತೋಲೆಯನ್ವಯ ಇವರನ್ನು ಸರ್ಕಾರಿ ಸೇವೆಯಲ್ಲಿ ಮುಂದುವರಿಸುವುದು ಸೂಕ್ತವಲ್ಲವೆಂದು ಪರಿಗಣಿಸಿ ಕ.ನಾ.ಸೇ.(ಸಿಸಿಎ) ನಿಯಮ 8((**viii**)ರ ಪ್ರಕಾರ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

### ಆದೇಶ

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಆಧಾರದ ಮೇಲೆ ಶ್ರೀ ಗಂಗಪ್ಪ ಪರಮಪ್ಪ ಕೋರ್‍ಯಾಗೋಳ(ಕೋರಿ) ಭಾರಿ ಗಂಡಾಳು, ಕನೀನಿನಿ, ಘಟಪ್ರಭಾ ಎಡದಂಡೆ ಕಾಲುವೆ ಉಪ ವಿಭಾಗ ಸಂ.11, ಮುಧ್ದೋಳ. ಇವರು ಕ್ರಿಮಿನಲ್ ಆರೋಪಕ್ಕೆ ಗುರಿಯಾಗಿ ಕ್ರಿಮಿನಲ್ ನ್ಯಾಯಾಲಯದಲ್ಲಿ ದೋಷಸಿದ್ಧಿಯಾಗಿ ಜೀವಾವಧಿ ಶಿಕ್ಷೆಗೆ ಗುರಿಯಾಗಿರುವುದರಿಂದ ಕೆ.ಸಿ.ಎಸ್.(ಸಿಸಿಎ) ನಿಯಮ 8((**viii**)ರ ಪ್ರಕಾರ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

**ಜಿ. ಗುರುಪ್ರಸಾದ್**
ಶಿಸ್ತು ಪ್ರಾಧಿಕಾರಿಗಳು ಹಾಗೂ ಮುಖ್ಯ ಇಂಜಿನಿಯರ್,
ಜ.ಸಂ.ಅ.ಸಂಸ್ಥೆ., ಬೆಂಗಳೂರು-9

PR-586

**ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ, ಬೆಂಗಳೂರು ಪ್ರಾಂತ ಚಾಮರಾಜಪೇಟೆ, ಬೆಂಗಳೂರು–18.**

**ದಾವಾ ಸಂಖ್ಯೆ: ಜೆಆರ್‌ಬಿ/ಡಿಐಎಸ್/498/1996–97**

| ವಾದಿ | ವಿರುದ್ಧ | ಪ್ರತಿವಾದಿಗಳು |
|---|---|---|
| **ಮುಖ್ಯಕಾರ್ಯನಿರ್ವಹಣಾಧಿಕಾರಿಗಳು**<br>ಬಿಬಿಆರ್ ಅಂಡ್ ಆರ್‌ಡಿಸಿಸಿ<br>ಬ್ಯಾಂಕ್ ನಿ., ಚಾಮರಾಜಪೇಟೆ,<br>ಬೆಂಗಳೂರು – 560018 | | 1. **ಕಾರ್ಯದರ್ಶಿ,**<br>ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು –21 |

2. **ಶ್ರೀ. ಶ್ರೀನಿವಾಸ,** ಮೇಜರ್,
ಅಧ್ಯಕ್ಷರು,
ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು –21

3. **ಶ್ರೀ ಜಿ.ಪ್ರಶಾಂತ,** ಮೇಜರ್,
ಕಾರ್ಯದರ್ಶಿ ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು –21

4. **ಶ್ರೀ ಕೆ. ಮುತ್ತುರಾಜ್**, ಮೇಜರ್,
ಉಪಾಧ್ಯಕ್ಷರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21

5. **ಶ್ರೀ ಆರ್. ಕುಮಾರ್,** ಮೇಜರ್, ನಿರ್ದೇಶಕರು,
ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21

6. **ಶ್ರೀ ಬಿ.ವಿ.ಪ್ರವೀಣ್ ಕುಮಾರ್,**
ಮೇಜರ್, ನಿರ್ದೇಶಕರು ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21

7. **ಶ್ರೀ ಟಿ.ಎಂ.ನಾಗರಾಜ್,**
ಮೇಜರ್, ನಿರ್ದೇಶಕರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21

8. **ಶ್ರೀ ಹೆಚ್.ಆರ್.ಸುರೇಶ್,**
ಮೇಜರ್, ನಿರ್ದೇಶಕರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21

9. **ಶ್ರೀ ಪಿ.ಎಸ್.ಹರಿಯಣ್ಣ ಗೌಡ,**
ಮೇಜರ್, ನಿರ್ದೇಶಕರು,
ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು–21

10. **ಶ್ರೀ ಪಿ. ಎಸ್.ಪಾಪಣ್ಣ,**
ಮೇಜರ್, ನಿರ್ದೇಶಕರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು – 21

11. **ಶ್ರೀಮತಿ ಟಿ.ಎಸ್.ಯಶೋಧ,**
ಮೇಜರ್, ನಿರ್ದೇಶಕರು,
ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು – 21

12. **ಶ್ರೀ ವಿ. ಆನಂದ,**
ಮೇಜರ್, ನಿರ್ದೇಶಕರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು – 21

13. **ಶ್ರೀ ಸೋಮಸುಂದರ,**
ಮೇಜರ್, ನಿರ್ದೇಶಕರು, ನವಕರ್ನಾಟಕ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ನಂ.31/2, 1ನೇ ಮುಖ್ಯರಸ್ತೆ, 5ನೇ ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು – 21

**14. ಶ್ರೀ ಹೆಚ್.ಬಿ.ಉಮೇಶ್,**
(ಪೌತಿ) ಅವರ ವಾರಸುದಾರರು.

**14. 1ಎ. ಶ್ರೀಮತಿ ಹೆಚ್.ಎಸ್.ಹರಿಣಿ**

ಕೋಂ:ಲೇಟ್: ಹೆಚ್.ಬಿ.ಉಮೇಶ್.

**1ಬಿ. ಶ್ರೀ ಕೀರ್ತಿ ಕಂದಾ,**

ಬಿನ್:ಲೇಟ್: ಹೆಚ್.ಬಿ.ಉಮೇಶ್.

**1ಸಿ. ಶ್ರೀ ಚರಣ್.**

ಬಿನ್:ಲೇಟ್: ಹೆಚ್.ಬಿ.ಉಮೇಶ್.

**ವಿಳಾಸ:** ನಂ. 112, ಐ.ಸಿ.ಎಸ್.ಸಿ. ಮೇನ್ ರೋಡ್, ನಾಗರಭಾವಿ, ಬೆಂಗಳೂರು –72

15. **ಶ್ರೀ ನಾರಾಯಣ ಗೌಡ,** ಮೇಜರ್, ಬಿನ್ ಪುಟ್ಟೇಗೌಡ, ಮಾಜಿ ಅಧ್ಯಕ್ಷರು ಹಾಗೂ ಹಾಲಿ ನಿರ್ದೇಶಕರು, ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., ಕೆರಳಾಲುಸಂದ್ರ, ಮಳಗಳು ಪೋಸ್ಟ್, ಕಸಬಾ ಹೋಬಳಿ, ಕನಕಪುರ ತಾಲ್ಲೂಕು, ಬೆಂಗಳೂರು (ಗ್ರಾ)ಜಿಲ್ಲೆ.

16. **ಶ್ರೀ ಎಸ್.ಜಿ.ಚೆಲುವಯ್ಯ** ಮೇಜರ್,
ಮಾಜಿ ಉಪಾಧ್ಯಕ್ಷರು,
ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., ಸೊಂಡೆಕೊಪ್ಪ, ಸೊಂಡೆಕೊಪ್ಪ ಪೋಸ್ಟ್, ನೆಲಮಂಗಲ ತಾ: ಬೆಂಗಳೂರು(ಗ್ರಾ) ಜಿಲ್ಲೆ

17. **ಶ್ರೀ ವಿ. ಚನ್ನಪ್ಪ** ಮೇಜರ್.

(ಮೃತಪಟ್ಟಿರುತ್ತಾರೆ) ಪ್ರತಿನಿಧಿಸುವವರು ಅವರ ವಾರಸುದರರು

17ಎ. **ಶ್ರೀಮತಿ ಜಯಮ್ಮ,** ವಯಸ್ಕಳು ಕೋಂ: ಲೇಟ್: ವಿ.ಚನ್ನಪ್ಪ.

17**ಬಿ. ಶ್ರೀ ಸಿ. ರಮೇಶ್,** ವಯಸ್ಕರು ಬಿನ್: ಲೇಟ್: ವಿ.ಚನ್ನಪ್ಪ.

17ಸಿ. **ಶ್ರೀ ಸಿ.ವೇಣುಗೋಪಾಲ್,** ವಯಸ್ಕರು ಬಿನ್: ಲೇಟ್: ವಿ.ಚನ್ನಪ್ಪ.

17ಡಿ. **ಶ್ರೀ ಸಿ. ಪ್ರಕಾಶ್,** ವಯಸ್ಕರು

ಬಿನ್: ಲೇಟ್: ವಿ.ಚನ್ನಪ್ಪ. ಪ್ರತಿವಾದಿ 17ಎ ರಿಂದ 17ಡಿ ರವರ

**ವಿಳಾಸ:** ನೆರಳಘಟ್ಟ ಗ್ರಾಮ, ಅಣಬೆ ಪೋಸ್ಟ್, ದೊಡ್ಡಬಳ್ಳಾಪುರ ತಾ: ಬೆಂಗಳೂರು (ಗ್ರಾ) ಜಿಲ್ಲೆ. 17ಡಿ ರವರು ವಾದಿ ಬ್ಯಾಂಕಿನಲ್ಲಿ ನೌಕರರಾಗಿ ಹಾಲಿ ಕೆಲಸ ನಿರ್ವಹಿಸುತ್ತಿರುತ್ತಾರೆ.

18. **ಶ್ರೀ ಎ.ನರಸಿಂಹಯ್ಯ,** ಮೇಜರ್,
ಮಾಜಿ ನಿರ್ದೇಶಕರು,
ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ.,ಗಂಟಿಗಾನಹಳ್ಳಿ ಪೋಸ್ಟ್, ಕುರವೇಗೆರೆ, ದೊಡ್ಡಬಳ್ಳಾಪುರ ತಾ: ಬೆಂಗಳೂರು (ಗ್ರಾ) ಜಿಲ್ಲೆ.

19. **ಶ್ರೀ ಎನ್.ಎಸ್,ನರಸೇಗೌಡ,** ಮೇಜರ್,
ಮಾಜಿ ನಿರ್ದೇಶಕರು,
ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., ನಂ.692, 'ಎ' 8ನೇ ಮೇನ್, 3ನೇ ಸ್ಟೇಜ್, 3ನೇ ಬ್ಲಾಕ್, ಬಸವೇಶ್ವರ ನಗರ, ಬೆಂಗಳೂರು – 79

20. **ಶ್ರೀ ಬಿ.ರಾಮಿರೆಡ್ಡಿ,** ಮೇಜರ್,
ಮಾಜಿ ವ್ಯವಸ್ಥಾಪಕ ನಿರ್ದೇಶಕರು, ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್
ನಿ., ನಂ.124, 'ಎ'ಪ್ಲೋರ್, 26ನೇ ಕ್ರಾಸ್, 6ನೇ ಬ್ಲಾಕ್, ಜಯನಗರ, ಬೆಂಗಳೂರು–20

21. **ಶ್ರೀ ಕೆ.ಟಿ.ವೆಂಕಟಸ್ವಾಮಿ,** ಮೇಜರ್,
ಮಾಜಿ ಶಾಖಾ ವ್ಯವಸ್ಥಾಪಕರು(ನಿವೃತ್ತ),
ಕೇಂದ್ರ ಕಛೇರಿ ಶಾಖೆ. ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., ನಂ.1013 ಇ, ಮೂಕಾಂಬಿಕ ಎ.ಆರ್.ಅವೆನ್ಯೂ, ನ್ಯೂ ತಿಪ್ಪಸಂದ್ರ, ಬೆಂಗಳೂರು–75

22. **ಶ್ರೀ ಎಂ. ಹೊನ್ನಲಿಂಗೇಗೌಡ,** ಮೇಜರ್,
ಮಾಜಿ ಶಾಖಾ ವ್ಯವಸ್ಥಾಪಕರು(ನಿವೃತ್ತ),
ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., ಯಶವಂತಪುರ ಶಾಖೆ, ನಂ.464, 10ನೇ 'ಇ' ಮೇನ್ ರೋಡ್, 6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10

23. **ಶ್ರೀ ರಾಮಾಂಜನಪ್ಪ,** ಮೇಜರ್,

ಶಾಖಾ ಸೂಪರ್‌ವೈಸರ್, (ಅಂಡರ್ ಸಸ್‌ಪೆನ್‌ಷನ್) ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., ಯಶವಂತಪುರ ಶಾಖೆ, ನಂ.464, 10ನೇ ಇ ಮೇನ್ ರೋಡ್, 6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10

24. **ಶ್ರೀ ರಾಮಕೃಷ್ಣ,** ಮೇಜರ್,

ಶಾಖಾ ವ್ಯವಸ್ಥಾಪಕರು(ಅಂಡರ್ ಸಸ್‌ಪೆನ್‌ಷನ್) ಬಿಬಿಆರ್ ಅಂಡ್ ಆರ್‌ಡಿಸಿಸಿಬ್ಯಾಂಕ್ ನಿ., (ಪ್ಲಾನಿಂಗ್ & ಡೆವಲಪ್‌ಮೆಂಟ್ ಶಾಖೆ) ನಂ.221, 5ನೇ ಕ್ರಾಸ್, 1ನೇ ಮೇನ್, 1ನೇ ಹಂತ, ಕೆ,ಹೆಚ್.ಬಿ.ಕಾಲೋನಿ., ಬಸವೇಶ್ವರ ನಗರ, ಬೆಂಗಳೂರು–79

25. **ಶ್ರೀ ರಂಗರಾಜು,**

ಜೂನಿಯರ್ ಅಸಿಸ್ಟೆಂಟ್, ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., ಯಶವಂತಪುರ ಶಾಖೆ. ನಂ466, 8ನೇ ಕ್ರಾಸ್, ಮಹಾಲಕ್ಷ್ಮೀ ಲೇಜೌಟ್, ಬೆಂಗಳೂರು–86.

26. **ಶ್ರೀ ಎ.ಸಿ.ಲಕ್ಷ್ಮೀಕಾಂತ,**

ಕ್ಯಾಶಿಯರ್, ಬಿಬಿಆರ್ ಅಂಡ್ ಆರ್‌ಡಿಸಿಸಿ ಬ್ಯಾಂಕ್ ನಿ., ಯಶವಂತಪುರ ಶಾಖೆ. ನಂ.96, ಕಿರಣ್ ನಿಲಯ, 3ನೇ ಮೇನ್ ರೋಡ್, ಸರಸ್ವತಿ ಪುರ, ನಂದಿನಿಲೇಜೌಟ್, ಬೆಂಗಳೂರು–96

27. **ಶ್ರೀ ಹೆಚ್.ಎಲ್.ಶಿವಕುಮಾರ್,**

ಬಿನ್ ಲಕ್ಷ್ಮಣಗೌಡ, ಜೂನಿಯರ್ ಅಸಿಸ್ಟೆಂಟ್, ಬಿಡಿ ಅಂಡ್ ಬಿಆರ್ ಆರ್ ಡಿಸಿಸಿ ಬ್ಯಾಂಕ್ ನಿ., ಕೇಂದ್ರ ಕಛೇರಿ, ನಂ.32, 3ನೇ ಕ್ರಾಸ್, ವಿಠಲ್‌ನಗರ, ಚಾಮರಾಜಪೇಟೆ, ಬೆಂಗಳೂರು–18

28. **ಶ್ರೀ ಬಿ.ಎಸ್.ಅನಂತಮೂರ್ತಿ,**

ಪ್ರೋ: ಶ್ರೀ ಲಕ್ಷ್ಮೀ ಸಿಲ್ಕ್ ವೀವಿಂಗ್ ಫ್ಯಾಕ್ಟರಿ, ಶ್ರೀರಾಮಪುರಂ, ಬೆಂಗಳೂರು.

29. **ಶ್ರೀ ಬಿ.ಎಸ್.ವೆಂಕಟೇಶ್,**

ನಂ. 45/1, 11ನೇ ಕ್ರಾಸ್, 7ನೇ ಮೇನ್, ಶ್ರೀರಾಮಪುರಂ, ಬೆಂಗಳೂರು.

30. **ಶ್ರೀ ಎಸ್.ಜಿ.ಗುಪ್ತಾ,**

ಕೇ: ನವಕರ್ನಾಟಕ ಕ್ರೆಡಿಟ್ ಕೋ– ಅಪರೇಟಿವ್ ಸೊಸೈಟಿ ಲಿ., ನಂ.31/2, 1ನೇ 5ನೇ ಮುಖ್ಯ ರಸ್ತೆ, ಕ್ರಾಸ್, ಮಾರುತಿ ಬಡಾವಣೆ, ಶ್ರೀರಾಮಪುರಂ, ಬೆಂಗಳೂರು – 21

**"1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರ ರೀತ್ಯಾ ಪ್ರತಿವಾದಿ 17ಎ ರಿಂದ 17ಡಿ ರವರ ಸ್ಥಿರಾಸ್ತಿಗಳನ್ನು ಆದೇಶಕ್ಕೆ ಮುನ್ನ ಜಪ್ತಿ ಮಾಡುವ ನೋಟೀಸು"**

**ಪ್ರಸ್ತಾವನೆ:–**

1. ವಾದಿಯು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿ ದಾವಾ ಅರ್ಜಿಯನ್ನು ಸಲ್ಲಿಸಿ 1 ರಿಂದ 30ನೇ ಪ್ರತಿವಾದಿಗಳಿಂದ ರೂ.4,36,78,537/–(ರೂ. ನಾಲ್ಕು ಕೋಟಿ ಮೂವತ್ತಾರು ಲಕ್ಷದ ಎಪ್ಪತ್ತೆಂಟು ಸಾವಿರದ ಐದು ನೂರ ಮೂವತ್ತೇಳು ರೂಪಾಯಿಗಳು ಮಾತ್ರ) ಗಳು ಹಾಗೂ ಈ ಮೊತ್ತಕ್ಕೆ ದಿನಾಂಕ: 24–05–1996 ರಿಂದ ಸಾಲಿಯಾನ ಶೇ.22.5% ರಷ್ಟು ಬಡ್ಡಿ ದರದಂತೆ ಅಸಲು ಮತ್ತು ಬಡ್ಡಿ ವಸೂಲಾತಿಗಾಗಿ ದಾವೆಯನ್ನು ಹೂಡಿರುತ್ತಾರೆ. ಈ ದಾವೆಯನ್ನು ವಿಚಾರಣೆಗೆ ತೆಗೆದುಕೊಂಡು, ವಿಚಾರಣೆ ನಡೆಸಲಾಗುತ್ತಿದೆ. ಪ್ರಕರಣದ ವಿಚಾರಣಾ ಹಂತದಲ್ಲಿ ವಾದಿಯು ಪ್ರಮಾಣ ಪತ್ರದೊಂದಿಗೆ ಕಲಂ 103 ರಡಿ ಅರ್ಜಿಯನ್ನು ಸಲ್ಲಿಸಿ 17ಎ ರಿಂದ 17ಡಿ ರವರುಗಳ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

2. ಅರ್ಜಿದಾರರು ಕಲಂ 103 ರ ಅರ್ಜಿ ಜೊತೆ ಸಲ್ಲಿಸಲಾಗಿರುವ ಪ್ರಮಾಣ ಪತ್ರದಲ್ಲಿ 1ನೇ ಪ್ರತಿವಾದಿ ಸಂಘದ ಆಡಳಿತ ಮಂಡಳಿಯನ್ನು ಸಹಕಾರ ಇಲಾಖೆಯು 1994ನೇ ಸಾಲಿನಲ್ಲಿ ರದ್ದು ಮಾಡಿರುತ್ತದೆ. ಈ ಆದೇಶವನ್ನು ಬಾದಿತ ವಾದಿ ಬ್ಯಾಂಕಿನ ಆಡಳಿತ ಮಂಡಳಿ ಸದಸ್ಯರು ಗೌರವ ಉಚ್ಚ ನ್ಯಾಯಾಲಯದದಲ್ಲಿ ಪ್ರಶ್ನಿಸಿದ್ದು, ರಿಟ್ ಅಪೀಲು ಸಂ.2218 ಮತ್ತು 2219 ಅಫ/1991 ಹಾಗೂ 1992/1994 ಈ ರಿಟ್ ಅಪೀಲಿನನ್ವಯ ಗೌರವ ನ್ಯಾಯಾಲಯವು ಪ್ರತಿವಾದಿ 15 ರಿಂದ 19 ರವರುಗಳನ್ನು Government Nominees as Ad-Hoc Committee members to run the bank administration till holding of new election on 02–12–1994 ಅದರನ್ವಯ ಸದರಿ ಅಡಾಕ್ ಕಮಿಟಿಯು ದಿನಾಂಕ: 13–05–1995 ರವರೆಗೆ ಕಾರ್ಯನಿರ್ವಹಿಸಿರುತ್ತದೆ. ಈ ಅವಧಿಯಲ್ಲಿ 17ನೇ ಪ್ರತಿವಾದಿಯು ನಿರ್ದೇಶಕರಾಗಿ ಕಾರ್ಯನಿರ್ವಹಿಸಿ ಈ ಅವಧಿಯಲ್ಲಿ ಸಾಲಗಳನ್ನು ಮಂಜೂರು ಮಾಡಿರುತ್ತಾರೆ. ಆದರೆ ಅಡಾಕ್ ಕಮಿಟಿಯು ವಾದಿ ಸಂಘದಲ್ಲಿ ರೂ. 4,00,00,000/– ಕ್ಕೆ ದಿನಾಂಕ: 15–04–1995 ರಂದು ಅರ್ಜಿ ಸಲ್ಲಿಸಿ ಸಾಲವನ್ನು ಪಡೆದಿರುತ್ತಾರೆ. ಆದರೆ ಈ ಸಾಲ ಮಂಜೂರಾತಿಯಲ್ಲಿ ಅಡಾಕ್ ಕಮಿಟಿಯು ಗೌರವ ಉಚ್ಚ ನ್ಯಾಯಾಲಯದ ಆದೇಶ, ಸಂಘದ ಬೈಲಾ ಮತ್ತು ಸಾಲಗಳ ನಿಯಮ ಮತ್ತು ನಿಬಂಧನೆಗಳನ್ನು ಉಲ್ಲಂಘನೆ ಮಾಡಿ, ಅರ್ಜಿದಾರ ಬ್ಯಾಂಕಿಗೆ ಸುಳ್ಳು ಮಾಹಿತಿ ನೀಡಿ ಮೋಸ ಮಾಡಿರುತ್ತಾರೆ. ಆದರೆ ಪ್ರಸ್ತುತ 1ನೇ ಪ್ರತಿವಾದಿ ಸಂಘವು ತನ್ನ ಕಾರ್ಯಚಟುವಟಿಕೆ ನಡೆಸದೇ ಇರುವಂತಹ ಸ್ಥಿತಿಯನ್ನು ತಲುಪಿದ್ದು, ಮುಂದೆಯು ಸಹ ಕಾರ್ಯಚಟುವಟಿಕೆಗಳನ್ನು ನಡೆಸುವ ಸಾಧ್ಯತೆ ಇಲ್ಲವೆಂದು ಮನಗಂಡು ಕಲಂ 70 ರಡಿಯಲ್ಲಿ ದಾವೆಯನ್ನು ಹೂಡಲಾಗಿದೆ. ಈ ಎಲ್ಲಾ ಅವ್ಯವಹಾರಕ್ಕೆ ಅಡಾಕ್ ಕಮಿಟಿಯ ಸದಸ್ಯರು, 1ನೇ ಪ್ರತಿವಾದಿ ಸಂಘದ ಆಡಳಿತ ಮಂಡಳಿ ಸದಸ್ಯರು ಮತ್ತು ಬ್ಯಾಂಕಿನ ನೌಕರರು ಒಳಗೂಡಿ ವೈಯಕ್ತಿಕವಾಗಿ ಮತ್ತು ಜಂಟಿಯಾಗಿ ಅವ್ಯವಹಾರ ನಡೆಸಿ ಅರ್ಜಿದಾರ ಬ್ಯಾಂಕಿನ ಸಾಲದ ಮೊತ್ತವನ್ನು ಉಪಯೋಗಿಸಿಕೊಂಡು ನಂತರ ಬ್ಯಾಂಕಿಗೆ ನಷ್ಟ ಉಂಟಾಗಲು ಕಾರಣ ಕರ್ತರಾಗಿರುತ್ತಾರೆ. ಈ ಹಿನ್ನೆಲೆಯಲ್ಲಿ ದಾವೆಗಳನ್ನು ಹೂಡಲಾಗಿದೆ. ಆದರೆ ಈ ದಾವೆಯು ಇತ್ಯರ್ಥವಾಗುವಲ್ಲಿ ಕಾನೂನು ರೀತ್ಯಾ ನಡವಳಿಕೆಗಳು ನಡೆಸಿ ಇತ್ಯರ್ಥಪಡಿಸುವಲ್ಲಿ ಸಮಯಾವಕಾಶ ತೆಗೆದುಕೊಳ್ಳುತ್ತಿದ್ದು, ಈ ಮಧ್ಯ ಪ್ರತಿವಾದಿಗಳು ತಮ್ಮ

ಹೆಸರಿನಲ್ಲಿರುವ ಮತ್ತು ತಮ್ಮ ಕುಟುಂಬ ಸದಸ್ಯರ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡುವ ಸಾಧ್ಯತೆಗಳಿರುತ್ತವೆ. ಒಂದು ವೇಳೆ ಈ ರೀತಿ ಪ್ರತಿವಾದಿಗಳು ತಮ್ಮ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡಿದ ಪಕ್ಷದಲ್ಲಿ ಈ ದಾವೆಯ ಅಂತಿಮ ಆದೇಶ ಅರ್ಜಿದಾರ ಬ್ಯಾಂಕಿನ ಪರವಾಗಿ ಬಂದರೂ ಸಹ ಅವಾರ್ಡ್ ಮೊತ್ತವನ್ನು ವಸೂಲಿ ಮಾಡಿಕೊಳ್ಳಲು ಸಾಧ್ಯವಾಗದ ಪರಿಸ್ಥಿತಿ ಉಂಟಾಗುವ ಸಾಧ್ಯತೆ ಇರುವುದರಿಂದ ವಾದಿಯು ದಿನಾಂಕ 20–1–2012 ರಂದು ಪ್ರಮಾಣ ಪತ್ರದೊಂದಿಗೆ ಕಲಂ 103 ರಡಿಯಲ್ಲಿ ಸಲ್ಲಿಸಲಾಗಿದ್ದ ಅರ್ಜಿಯನ್ವಯ ದಿನಾಂಕ 30–1–2012 ರಂದು 17ನೇ ಪ್ರತಿವಾದಿಗೆ ಕಲಂ 103 ರಡಿಯಲ್ಲಿ ಷರತ್ತುಬದ್ದ ನೋಟೀಸ್ ನೀಡಿದ ಒಂದು ತಿಂಗಳೊಳಗಾಗಿ ಷರತ್ತುಗಳನ್ನು ಪೂರೈಸದಿದ್ದ ಪಕ್ಷದಲ್ಲಿ ಕಲಂ 103 ರಡಿಯಲ್ಲಿ ನೀಡಲಾಗಿದ್ದ ನೋಟೀಸ್ ಆಧಾರವಾಗಿ ಷೆಡ್ಯೂಲ್ ಸ್ವತ್ತನ್ನು ಆದೇಶ ಪೂರ್ವ ಜಪ್ತಿ ಮಾಡಲು ನೀಡಲಾಗಿರುವ ನೋಟೀಸನ್ನು ಸ್ಥಿರೀಕರೀಸಲಾಗಿವುದು ಎಂದು ತಿಳಿಸಲಾಗಿತ್ತು. ಆದರೆ, 17ನೇ ಪ್ರತಿವಾದಿಯು ನೋಟೀಸ್ ದಿನಾಂಕ 30–1–2012 ರಲ್ಲಿ ತಿಳಿಸಿರುವ ಯಾವುದೇ ಷರತ್ತುಗಳನ್ನು ಪೂರೈಸುವುದಿರುವುದಿಲ್ಲ. ಈ ಮಧ್ಯೆ, 17ನೇ ಪ್ರತಿವಾದಿಯು ದಿನಾಂಕ 27–8–2012 ರಂದು ಮರಣ ಹೊಂದಿರುವ ಹಿನ್ನೆಲೆಯಲ್ಲಿ 17ನೇ ಪ್ರತಿವಾದಿಗಳ ವಾರಸುದಾರರಾದ ಶ್ರೀಮತಿ ಜಯಮ್ಮ – ಪ್ರತಿವಾದಿ 17ಎ, ಶ್ರೀ ರಮೇಶ್ – 17ಬಿ, ಶ್ರೀ ಸಿ. ವೇಣುಗೋಪಾಲ್ – 17ಸಿ, ಶ್ರೀ ಸಿ. ಪ್ರಕಾಶ್ – 17ಡಿ, ರವರುಗಳನ್ನು ಈ ಪ್ರಕರಣದಲ್ಲಿ ಪ್ರತಿವಾದಿಗಳನ್ನಾಗಿ ಮಾಡಿ ದಿನಾಂಕ 8–4–2013 ರಂದು ಆದೇಶ ಹೊರಡಿಸಲಾಗಿದೆ. ತದನಂತರ, ದಿನಾಂಕ 23–6–2014 ರಂದು ನಡೆದ ವಿಚಾರಣೆಯಲ್ಲಿ ವಾದಿಯು ಕಲಂ 103 ರಡಿ ಪ್ರಮಾಣ ಪತ್ರದೊಂದಿಗೆ ಅರ್ಜಿಯನ್ನು ಸಲ್ಲಿಸಿ, 17ನೇ ಪ್ರತಿವಾದಿಯ ವಾರಸುದಾರರಾದ ಪ್ರತಿವಾದಿ 17ಎ, ಬಿ, ಸಿ ಮತ್ತು ಡಿ ರವರುಗಳಿಗೆ ಸೇರಿದ ಸ್ಥಿರಾಸ್ತಿಯನ್ನು ಆದೇಶಪೂರ್ವ ಜಪ್ತಿ ಮಾಡಿ ಆದೇಶ ಹೊರಡಿಸಬೇಕೆಂದು ಕೋರಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ, ಈ ಅರ್ಜಿಯೊಂದಿಗೆ ಸ್ಥಿರಾಸ್ತಿ ಸಂಬಂಧಿಸಿದ ದಾಖಲಾತಿಗಳನ್ನು ವಾದಿ ಹಾಜರುಪಡಿಸಿದ್ದು, ಈ ದಾಖಲಾತಿಗಳಾದ ಮುಟೇಷನ್ ಮತ್ತು ವಿಭಾಗ ಪತ್ರದ ಪ್ರತಿಗಳನ್ನು ಪರಿಶೀಲಿಸಿದಾಗ ಷೆಡ್ಯೂಲ್ ಸ್ವತ್ತು ಪ್ರತಿವಾದಿ – 17ಎ ರಿಂದ ಪ್ರತಿವಾದಿ – 17ಡಿ ರವರುಗಳ ಹೆಸರಿನಲ್ಲಿರುವುದು ಕಂಡು ಬಂದಿರುತ್ತದೆ. 17ನೇ ಪ್ರತಿವಾದಿಯಾದ ಶ್ರೀ ವಿ. ಚನ್ನಪ್ಪ ರವರ ಮತ್ತು ಮಕ್ಕಳು ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಆದೇಶಕ್ಕೆ ಪೂರ್ವ ಜಪ್ತಿ ಆದೇಶ ಹೊರಡಿಸಬೇಕೆಂದು ಅರ್ಜಿ ಸಲ್ಲಿಸಿರುತ್ತಾರೆ.

3. ವಾದಿ ಬ್ಯಾಂಕು ಕಲಂ 103 ರಡಿಯಲ್ಲಿ ಸಲ್ಲಿಸಿರುವ ಅರ್ಜಿ ಹಾಗೂ ಅರ್ಜಿಯೊಂದಿಗಿನ ಪ್ರಮಾಣ ಪತ್ರವನ್ನು ಮತ್ತು ಅದರ ಜೊತೆಗೆ ಲಗತ್ತಿಸಿರುವ ಮುಟೇಷನ್ ಮತ್ತು ವಿಭಾಗ ಪತ್ರದ ಪ್ರತಿಗಳನ್ನು ಪರಿಶೀಲಿಸಿದಾಗ ಷೆಡ್ಯೂಲ್ ಸ್ವತ್ತು ಪ್ರತಿವಾದಿ 17ಎ ರಿಂದ ಪ್ರತಿವಾದಿ 17ಡಿ ರವರ ಹೆಸರಿನಲ್ಲಿರುವುದು ಕಂಡುಬರುತ್ತದೆ. 17ನೇ ಪ್ರತಿವಾದಿ ಶ್ರೀ. ವಿ. ಚನ್ನಪ್ಪರವರು ನಿಧನರಾದ ನಂತರ ಕಾನೂನುಬದ್ದ ವಾರಸ್ಸುದಾರರನ್ನು ಸಹಕಾರ ಸಂಘಗಳ ಕಾಯ್ದೆ 1959 ಕಲಂ 70(1)(ಸಿ)ರ ನಿಯಮದಲ್ಲಿ ವಾರಸುದಾರರನ್ನು ಪ್ರತಿವಾದಿಯನ್ನಾಗಿ ಸೇರ್ಪಡೆ ಮಾಡಲಾಗಿದ್ದು, ಇವರ ವಿರುದ್ದವೂ ಸಹ ದಾವೆಯನ್ನು ಹೂಡಲು ಅವಕಾಶವಿರುವುದರಿಂದ ಹಾಗೂ ವಾರಸ್ಸುದಾರರನ್ನು ದಿನಾಂಕ 8–4–2013 ರಂದು ನಡೆದ ವಿಚಾರಣಾ ದಿನಾಂಕದಲ್ಲಿ ಈ ಪ್ರಕರಣದಲ್ಲಿ ಪ್ರತಿವಾದಿಗಳನ್ನಾಗಿ ಮಾಡಲಾಗಿದೆ. ಆದ ಕಾರಣ, ವಾದಿಯು ಕಲಂ 103 ರಡಿ ಸಲ್ಲಿಸಿರುವ ಅರ್ಜಿಯನ್ನು ಪುರಸ್ಕರಿಸಲು ಕಾನೂನಡಿಯಲ್ಲಿ ಅವಕಾಶವಿರುತ್ತದೆ. ಒಂದು ವೇಳೆ, ವಾದಿಯು ಸಲ್ಲಿಸಿರುವ ಕಲಂ 103 ರ ಅರ್ಜಿಯನ್ನು ಪುರಸ್ಕರಿಸದೇ ಇದ್ದ ಪಕ್ಷದಲ್ಲಿ ಪ್ರತಿವಾದಿಗಳು ಸದರಿ ಷೆಡ್ಯೂಲ್ ಸ್ವತ್ತನ್ನು ಪರಭಾರೆ ಮಾಡಿದ್ದೇ ಆದ ಪಕ್ಷದಲ್ಲಿ ಈ ಪ್ರಕರಣದಲ್ಲಿ ದಾವಾದೇಶ ವಾದಿ ಪರವಾಗಿ ಬಂದರೂ ಸಹ ಕ್ಲೇಂ ಮೊತ್ತವನ್ನು ವಸೂಲಿ ಮಾಡುವುದು ಕಷ್ಟಸಾಧ್ಯವಾಗುವುದನ್ನು ನ್ಯಾಯಾಲಯವು ಮನಗಂಡು ಪ್ರತಿವಾದಿ 17ಎ, 17ಬಿ, 17ಸಿ ಮತ್ತು 17ಡಿ ರವರುಗಳ ಹೆಸರಿನಲ್ಲಿರುವ ಸ್ಥಿರಾಸ್ತಿಯನ್ನು ಜಪ್ತಿ ಮಾಡುವುದು ಸೂಕ್ತವಾಗಿರುತ್ತದೆಂದು ಅಭಿಪ್ರಾಯಪಡಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ, ಸದರಿ ಪ್ರತಿವಾದಿಗಳ ಹೆಸರಿನಲ್ಲಿರುವ ಸ್ಥಿರಾಸ್ತಿಗಳನ್ನು ಆದೇಶ ಪೂರ್ವ ಜಪ್ತಿ ಆದೇಶ ನೀಡಿ ನೋಟಿಸು ನೀಡುವುದು ನ್ಯಾಯ ಸಮ್ಮತ ಮತ್ತು ಸಮಂಜಸವೆಂದು ಮನಗಂಡು ಈ ಕೆಳಕಂಡಂತೆ ಷರತ್ತುಬದ್ಧ ಆದೇಶಿಸಲಾಗಿದೆ.

**ಆದೇಶ**

ಈ ಮೇಲೆ ತಿಳಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ಮತ್ತು ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಸಂ.ಸಿಓ/139/ಸಿಎಂಎಲ್/2010 ದಿನಾಂಕ: 17–02–2011ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಬಿ.ಸಿ.ಸತೀಶ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಪ್ರತಿವಾದಿ 17ಎ ರಿಂದ ಪ್ರತಿವಾದಿ 17ಡಿ ರವರ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸಿಗಳನ್ನು ಷರತ್ತಿಗೊಳಪಟ್ಟು ಈ ಪ್ರಕರಣದ ಅಂತಿಮ ತೀರ್ಪಿಗೆ ಒಳಪಟ್ಟು ಜಪ್ತಿ ಪೂರ್ವ ಆದೇಶ ಹೊರಡಿಸಿರುತ್ತೇನೆ.

ಪ್ರತಿವಾದಿ 17ಎ ಯಿಂದ 17ಡಿ ಒಂದು ವೇಳೆ ಈ ಜಪ್ತಿ ಪೂರ್ವ ಆದೇಶದಲ್ಲಿ ತಿಳಿಸಿರುವ ಯಾವುದೇ ಸ್ಥಿರಾಸ್ತಿಯನ್ನು ಅಥವಾ ಸ್ಥಿರಾಸ್ತಿಯ ಯಾವುದೇ ಭಾಗವನ್ನು ಈ ಆದೇಶದಿಂದ ಮುಕ್ತ ಮಾಡಿಸಿಕೊಳ್ಳಲು ಇಚ್ಛಿಸಿದಲ್ಲಿ ಈ ದಾವೆಯ ಅರ್ಜಿಯಲ್ಲಿನ ವಾದಿ ಕ್ಲೈಮ್ ಮಾಡಿರುವ ಮೊತ್ತ ರೂ .4,36,78,537/–(ರೂ. ನಾಲ್ಕು ಕೋಟಿ ಮೂವತ್ತಾರು ಲಕ್ಷದ ಎಪ್ಪತ್ತೆಂಟು ಸಾವಿರದ ಐದು ನೂರ ಮೂವತ್ತೇಳು ರೂಪಾಯಿಗಳು ಮಾತ್ರ) ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ಈ ಆದೇಶ ಹೊರಡಿಸಿದ 30 ದಿವಸಗಳ ಒಳಗಾಗಿ ಜಮಾ ಮಾಡಿ ಅಧಿಕೃತ ಚಲನ್/ರಶೀದಿಯನ್ನು ಹಾಜುರುಪಡಿಸಿದಲ್ಲಿ ಈ ಆದೇಶದಲ್ಲಿ ತಿಳಿಸಿರುವ ಷೆಡ್ಯೂಲ್ ಸ್ವತ್ತನ್ನು ಮುಕ್ತಗೊಳಿಸುವ ಷರತ್ತಿಗೆ ಒಳಪಟ್ಟಿರುತ್ತದೆ.

ಒಂದು ವೇಳೆ ಪ್ರತಿವಾದಿ 17ಎ ರಿಂದ 17ಡಿ ಮೇಲೆ ತಿಳಿಸಿರುವಂತೆ ಈ ಆದೇಶ ಹೊರಡಿಸಿದ 30 ದಿವಸಗಳ ಒಳಗಾಗಿ ಅವಶ್ಯಕವಿರುವ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಈ ಆದೇಶ ಜಪ್ತಿ ಪೂರ್ವ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ಯಾವುದೇ ವ್ಯಕ್ತಿಗಳಿಗೆ ಈ ಆಸ್ತಿ ಪೂರ್ವ ಆದೇಶವು ಒಳಪಟ್ಟಿರುತ್ತದೆ.

**"ಷೆಡ್ಯೂಲ್ ಆಸ್ತಿ ವಿವರಗಳು"**

***Schedule No.1 property belongs to respondent No. 17a namely Smt, Jayamma.***

All that piece and parcel of the agricultural property bearing Sy, **No.36/1, of Galapuje Village measuring, 2 Acres 28 Guntas,** situated at Galapuje Village, Kasaba Hobli, Doddaballapura Taluk, Bangalore Rural District and Bounded on

| | |
|---|---|
| East by | : Property Belongs to H. Veeranna |
| West by | : Property belongs to Jayamma ('A' Schedule Property as per partition deed) |
| North by | : Property belongs to Muniyappa |
| South by | : Kere Angala |

***Schedule No.2 property belongs to respondent No.17a namely Smt, Jayamma.***

All that piece and parcel of the House property bearing Khaneshumari, **No.105, of Neralagatta Village, measuring 35 X 45,** situated at Neralagatta Village, Kasaba Hobli, Doddaballapura Taluk, Bangalore Rural District and Bounded on

East by : House property Belongs to H. Veeranna
West by : House property belongs to Channakrishnaiah
North by : House property belongs to Channappa and Venkataramanna
South by : Road

***Schedule No.3 property belongs to respondent No.17b namely Sri. N.C.Ramesh***

All that piece and parcel of the agricultural property bearing Sy, **No.35/1, of Neralagatta Village, measuring 3 Acres,** situated at Neralagatta Village, Kasaba Hobli, Doddaballapura Taluk, Bangalore Rural District and Bounded on

East by : Property belongs to Jayamma ('A' Schedule Property as per partition deed)
West by : Property belongs to Marigowda
North by : Property belongs to C. Prakash 'D' Schedule Property as per partition deed
South by : Kere Angala

***Schedule No.4 property belongs to respondent No. 17b namely Sri. N.C.Ramesh***

All that piece and parcel of the agricultural property bearing Sy, **No.50/1, of Maralenahalli Village, measuring 31 Guntas,** situated at Maralenahalli Village, Kasaba Hobli, Doddaballapura Taluk, Bangalore Rural District and Bounded on

East by : Property belongs to N.C. Venugopal ('C' Schedule Property as per partition deed)
West by : Property belongs to Mallikarjunaiah
North by : Property belongs to Channakrishnappa
South by : Property belongs to Marigowda

***Schedule No.5 property belongs to respondent No. 17b namely Sri. N.C.Ramesh***

All that piece and parcel of the agricultural property bearing Sy, **No.49, of Maralenahalli Village, measuring 28 Guntas,** situated at Maralenahalli Village, Kasaba Hobli, Doddaballapura Taluk, Bangalore Rural District and Bounded on

East by : Property belongs to N.V. Gopala Gowda
West by : Property belongs to Ramamurthy and Marigowda
North by : Property belongs to Marigowda
South by : Hanabe elle

***Schedule No.6 property belongs to respondent No. 17b namely Sri. N.C.Ramesh***

All that piece and parcel of the agricultural property bearing Sy, **No.140, of Hanabe Village, measuring 1 Acre 02 Guntas,** situated at Hanabe Village, Kasaba Hobli, Doddaballapura Taluk, Bangalore Rural District and Bounded on

East by : Property belongs to H.Veeranna and Son's
West by : Property belongs to Narayanappa
North by : Property belongs to C. Prakash ('D' Schedule Property as per partition deed)
South by : Property belongs to Narayanappa

***Schedule No.7 property belongs to respondent No. 17b namely Sri. N.C.Ramesh***

All that piece and parcel of the property bearing Khaneshumari **No.106, measuring 81 X 90** situated at Neralagatta Village, Kasaba Hobli, Doddaballapura Taluk, Bangalore Rural District and Bounded on

East by : Property belongs to H. Veeranna
West by : Road
North by : Jantha Colony
South by : Property belongs to Gopalaraj

***Schedule No.8 property belongs to respondent No. 17c namely Sri. N.C. Venu Gopal***

All that piece and parcel of the agricultural property bearing Sy, **No.35/1B, of Neralagatta Village, measuring 1 Acre 20 Guntas,** situated at Neralagatta Village, Kasaba Hobli, Doddaballapura Taluk, Bangalore Rural District and Bounded on

East by : Road
West by : Property belongs to Marigowda
North by : Road
South by : Property belongs to C. Prakash ('D' Schedule Property as per partition deed)

***Schedule No.9 property belongs to respondent No. 17c namely Sri. N.C. Venu Gopal***

All that piece and parcel of the agricultural property bearing Sy, **No.17/2, of Neralagatta Village, measuring 03 Guntas,** situated at Neralagatta Village, Kasaba Hobli, Doddaballapura Taluk, Bangalore Rural District and Bounded on

East by : House property belongs to Muniyappa and Karabuhalla
West by : Property belongs to N.V. Narayanappa Son's
North by : Road
South by : Property belongs to Vishwanath

***Schedule No.10 property belongs to respondent No. 17c namely Sri. N.C.Venu Gopal***

All that piece and parcel of the agricultural property bearing Sy, **No.48/2, of Maralenahalli Village, measuring 3 Acres 10 Guntas,** situated at Maralenahalli Village, Kasaba Hobli, Doddaballapura Taluk, Bangalore Rural District and Bounded on

East by : Property belongs to Channamma
West by : Property belongs to N.C. Ramesh ('B' Schedule Property as per partition deed)
North by : Property belongs to Channakrishnaiah
South by : Property belongs to Ramamurthy

***Schedule No.11 property belongs to respondent No. 17c namely Sri. N.C.Venu Gopal***

All that piece and parcel of the agricultural property bearing Sy, **No.119/1A, of Hanabe Village, measuring 12.5 Guntas,** situated at Hanabe Village, Kasaba Hobli, Doddaballapura Taluk, Bangalore Rural District and Bounded on

East by : Property belongs to Narayanappa and Nagaraju
West by : Property belongs to Channakrishnaiah
North by : Sy. No. 120 Property
South by : Property belongs to Channakrishnaiah

***Schedule No.12 property belongs to respondent No. 17c namely Sri. N.C. Venu Gopal***

All that piece and parcel of the agricultural property bearing Sy, **No.120/3A, of Hanabe Village, measuring 04 Guntas,** situated at Hanabe Village, Kasaba Hobli, Doddaballapura Taluk, Bangalore Rural District and Bounded on

East by : Property belongs to Narayanappa and Nagaraju
West by : Property belongs to Channakrishnaiah
North by : Property belongs to Ramamurthy
South by : Sy. No. 190/1A property

***Schedule No.13 property belongs to respondent No. 17d namely Sri. C. Prakash***

All that piece and parcel of the agricultural property bearing Sy, **No.35/1B, of Neralagatta Village, measuring 1 Acre 20 Guntas,** situated at Neralagatta Village, Kasaba Hobli, Doddaballapura Taluk, Bangalore Rural District and Bounded on

East by : Road
West by : Property belongs to Marigowda
North by : Property belongs to N.C. Venugopal ('C' Schedule Property as per partition deed)
South by : Property belongs to N.C. Ramesh ('B' Schedule Property as per partition deed)

***Schedule No.14 property belongs to respondent No. 17d namely Sri. C.Prakash***

All that piece and parcel of the agricultural property bearing Sy, **No.83/2, of Neralagatta Village, measuring 34 Guntas,** situated at Neralagatta Village, Kasaba Hobli, Doddaballapura Taluk, Bangalore Rural District and Bounded on

East by : Govt. Inam Property
West by : Govt. Kharabu Halla
North by : Sy.No. 84/2 Property
South by : Property belongs to Ramamurthy

***Schedule No.15 property belongs to respondent No. 17d namely Sri. C.Prakash***

All that piece and parcel of the agricultural property bearing Sy, **No.84/2, of Neralagatta Village, measuring 2 Acre 02 Guntas,** situated at Neralagatta Village, Kasaba Hobli, Doddaballapura Taluk, Bangalore Rural District and Bounded on

East by : Property belongs to Narayanappa
West by : Govt. Halla
North by : Property belongs to Narayanappa
South by : Sy. No. 83/2 Property

***Schedule No.16 property belongs to respondent No. 17d namely Sri. C.Prakash***

All that piece and parcel of the agricultural property bearing Sy, **No.140, of Hanabe Village, measuring 21 Guntas,** situated at Hanabe Village, Kasaba Hobli, Doddaballapura Taluk, Bangalore Rural District and Bounded on

East by : Property belongs to Hanumegowda and Gangadharappa
West by : Property belongs to Anjinappa and Appanna
North by : Property belongs to Channakrishnaiah
South by : Property belongs to N.C. Ramesh ('B' Schedule Property as per partition deed)

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿ ಮೊಹರು ನಿಶೆಯೊಂದಿಗೆ ಈ ದಿನ ಅಂದರೆ ದಿನಾಂಕ:23–06–2014 ರಂದು ಹೊರಡಿಸಿರುತ್ತೇನೆ.

**ಬಿ,ಸಿ,ಸತೀಶ್**

ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

**PR. 549**
**SC. 10**

## ಕಂದಾಯ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 234 ಎಲ್‌ಜಿಬಿ 2014, ಬೆಂಗಳೂರು, ದಿನಾಂಕ:16.09.2014.**

**ನಮೂನೆ 29**

**68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ – ನಿಯಮ 96.**

ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ರ 68ನೇ ಪ್ರಕರಣದ (5)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ದಿನಾಂಕ:06.03.2014ರ ಸಂಖ್ಯೆ:ಆರ್‌ಡಿ 328 ಎಲ್‌ಜಿಬಿ 2012 ದಿನಾಂಕ:13.11.2013 ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ 'ಹದ್ದು ಗಿಡದ ಹಳ್ಳದ ಖರಾಬು' ಜಮೀನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲಾತಿ ಹಾಗೂ ಜಿಲ್ಲಾಧಿಕಾರಿ, ರಾಮನಗರ ಜಿಲ್ಲೆ ಇವರ ವರದಿ ಮೇರೆಗೆ ಪರಿಶೀಲಿಸಿದ ನಂತರ ಖರಾಬು ಜಮೀನಿನ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ಜಮೀನು ಇರುವ ಗ್ರಾಮ | ಬೋಳಪ್ಪನಹಳ್ಳಿ ಕೇರಿ ಮತ್ತು ಜೀಗೇನಹಳ್ಳಿ |
| ತಾಲ್ಲೂಕು | ರಾಮನಗರ |
| ಜಿಲ್ಲೆ | ರಾಮನಗರ |
| ಸದರಿ ಭಾಗದ ವರ್ಣನೆ | ಹದ್ದು ಗಿಡದ ಹಳ್ಳದ ಖರಾಬು 0–16 ಗುಂಟೆ |
| ಸರಿ ಸುಮಾರು ವಿಸ್ತೀರ್ಣ | ಬೋಳಪ್ಪನಹಳ್ಳಿ ಕೇರಿ ಗ್ರಾಮದ ರೀ ಸ.ನಂ.119, 120 ಮತ್ತು ಜೀಗೇನಹಳ್ಳಿ ಗ್ರಾಮದ ರೀ ಸ.ನಂ.27, 28 ಮತ್ತು 29ರ ಮಧ್ಯೆ ಇರುವ 0–16 ಗುಂಟೆ |
| ಸಾರ್ವಜನಿಕ ರಸ್ತೆ / ಬೀದಿ / ಗಲ್ಲಿ / ದಾರಿ ಅಥವಾ ಅದರ ಭಾಗ | ರಾಮನಗರ ತಾಲ್ಲೂಕು, ಕಸಬಾ ಹೋಬಳಿ, ಬೋಳಪ್ಪನಹಳ್ಳಿ ಕೇರಿ ಗ್ರಾಮದ ಸ.ನಂ.119, 120 ಮತ್ತು ಜೀಗೇನಹಳ್ಳಿ ಗ್ರಾಮದ ಸ.ನಂ.27, 28 ಮತ್ತು 29 ರ ಮಧ್ಯೆ ಇರುವ 0–16 ಗುಂಟೆ ಹದ್ದುಹಿಡಿದ ಹಳ್ಳದ ಖರಾಬು ಜಮೀನು. |
| ಮೇರೆಗಳು | ಪೂರ್ವಕ್ಕೆ – ಜೀಗೇನಹಳ್ಳಿ ಸ.ನಂ.29, 28, 27<br>ಪಶ್ಚಿಮಕ್ಕೆ – ಬೋಳಪ್ಪನಹಳ್ಳಿ ಸ.ನಂ.119 ಹಾಗೂ 120<br>ಉತ್ತರಕ್ಕೆ – ಓಣಿ<br>ದಕ್ಷಿಣಕ್ಕೆ – ಶ್ರೀ ಎ.ವಿ.ಬಾಸ್ಕರ್ ಇವರ ಉಳಿಕೆ ಸ್ವತ್ತು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ–1).

PR. 701

SC. 200

## ಗೌರವಾನ್ವಿತ 7ನೇ ಅಪರ ಮುಖ್ಯ ಮಹಾನಗರ ದಂಡಾಧಿಕಾರಿಗಳ ನ್ಯಾಯಾಲಯ, ಬೆಂಗಳೂರು ನಗರ.

**ಕ್ರಿಮಿನಲ್ ಮಿಸ್‌ಲೇನಿಯಸ್ ನಂ. 6797/2014**

**ದಿನಾಂಕ 06.08.2014**

**ವಿಷಯ:** ಸುಬ್ರಮಣ್ಯನಗರ ಪೊಲೀಸ್ ಠಾಣೆಯಲ್ಲಿ ವಶಪಡಿಸಿಕೊಂಡಿರುವ ವಾಹನಗಳ ವಿವರ.

**ವಾರಸುದಾರರಿಲ್ಲದ ವಾಹನಗಳ ವಿವರ**

| ಕ್ರ.ಸಂ. | ಪೆಟಿಷನ್ ನಂ. | ಪಿ.ಎಫ್. ನಂ. | ವಾಹನದ ಟೈಪ್ | ರಿಜಿಸ್ಟ್ರೇಷನ್ ನಂ. | ಛಾಸ್ಸಿ ನಂ. | ಇಂಜಿನ್ ನಂ. |
|---|---|---|---|---|---|---|
| 1 | ಪೆಟಿಷನ್ ನಂ. 168/13 | 71/13 | ಕಪ್ಪು ಬಣ್ಣದ ಹಳೆಯ ಆಟೋ ರಿಕ್ಷಾ ಚಾಲನೆ ಸ್ಥಿತಿಯಲ್ಲಿಲ್ಲ | KA-02 3243 | F24DE 075837 | 240ED 72549 |
| 2 | ಪೆಟಿಷನ್ ನಂ. 170/13 | 73/13 | ಹಸಿರು ಬಣ್ಣದ ಹಳೆಯ ಬಜಾಜ್ ಚೇತಕ್ ಸ್ಕೂಟರ್ ಚಾಲನೆ ಸ್ಥಿತಿಯಲ್ಲಿಲ್ಲ | CKD 4295 | W05D2D 2201 | W05E 188339 |
| 3 | ಪೆಟಿಷನ್ ನಂ. 171/13 | 74/13 | ಗ್ರೇ ಬಣ್ಣದ ಹಳೆಯ ಬಜಾಜ್ ಚೇತಕ್ ಸ್ಕೂಟರ್ ಚಾಲನೆ ಸ್ಥಿತಿಯಲ್ಲಿಲ್ಲ | KA-05 K-4550 | 06F93G 44029 | 06E93F 74236 |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment WPP No. 297



| ಕ್ರ.ಸಂ. | ಪೆಟಿಷನ್ ನಂ. | ಪಿ.ಎಫ್. ನಂ. | ವಾಹನದ ಟೈಪ್ | ರಿಜಿಸ್ಟ್ರೇಷನ್ ನಂ. | ಛಾಸ್ಸಿ ನಂ. | ಇಂಜಿನ್ ನಂ. |
|---|---|---|---|---|---|---|
| 4 | ಪೆಟಿಷನ್ ನಂ. 172/13 | 75/13 | ಹಸಿರು ಬಣ್ಣದ ಹಳೆಯ ಬಜಾಜ್ ಚೇತಕ್ ಸ್ಕೂಟರ್ ಚಾಲನೆ ಸ್ಥಿತಿಯಲ್ಲಿಲ್ಲ | KA-04 S-906 | 06FBCJ 52959 | 35MBCJ 66132 |
| 5 | ಪೆಟಿಷನ್ ನಂ. 173/13 | 76/13 | ಕಂದು ಬಣ್ಣದ ಹಳೆಯ ಟಿವಿಎಸ್ ಎಕ್ಸ್‌ಎಲ್ 50 ಚಾಲನೆ ಸ್ಥಿತಿಯಲ್ಲಿಲ್ಲ | CAX 2247 | ಛಾಸ್ಸಿ ನಂಬರ್ ಕಂಡು ಬರುತ್ತಿಲ್ಲ | ಇಂಜಿನ್ ನಂಬರ್ ಕಂಡು ಬರುತ್ತಿಲ್ಲ |
| 6 | ಪೆಟಿಷನ್ ನಂ. 174/13 | 77/13 | ಹಸಿರು ಬಣ್ಣದ ಹಳೆಯ ಟಿವಿಎಸ್ ಎಕ್ಸ್‌ಎಲ್ 50 ಚಾಲನೆ ಸ್ಥಿತಿಯಲ್ಲಿಲ್ಲ | CKA 5553 | A911F 316486 | ಇಂಜಿನ್ ನಂಬರ್ ಕಂಡು ಬರುತ್ತಿಲ್ಲ |
| 7 | ಪೆಟಿಷನ್ ನಂ. 178/13 | 78/13 | ಹಸಿರು ಬಣ್ಣದ ಹಳೆಯ ಬಜಾಜ್ ಚೇತಕ್ ಸ್ಕೂಟರ್. ಚಾಲನೆ ಸ್ಥಿತಿಯಲ್ಲಿಲ್ಲ | KA-02 Q-9774 | 06F95L 46097 | ಇಂಜಿನ್ ನಂಬರ್ ಕಂಡು ಬರುತ್ತಿಲ್ಲ |
| 8 | ಪೆಟಿಷನ್ ನಂ. 179/13 | 79/13 | ಹಸಿರು ಬಣ್ಣದ ಹಳೆಯ ಬಜಾಜ್ ಚೇತಕ್ ಸ್ಕೂಟರ್. ಚಾಲನೆ ಸ್ಥಿತಿಯಲ್ಲಿಲ್ಲ | ರಿಜಿಸ್ಟ್ರೇಷನ್ ನಂಬರ್ ಇರುವುದಲ್ಲ | 06F93G 49880 | ಇಂಜಿನ್ ನಂಬರ್ ಕಂಡು ಬರುತ್ತಿಲ್ಲ |
| 9 | ಪೆಟಿಷನ್ ನಂ. 180/13 | 80/13 | ಸಿಲ್ವರ್ ಬಣ್ಣದ ಹಳೆಯ ಹೀರೋ ಪುಕ್. ಚಾಲನೆ ಸ್ಥಿತಿಯಲ್ಲಿಲ್ಲ | KA-04 E-3177 | CA30290 | 30624 |
| 10 | ಪೆಟಿಷನ್ ನಂ. 181/13 | 81/13 | ನೀಲಿ ಬಣ್ಣದ ಹಳೆಯ ಟಿವಿಎಸ್ ಚಾಂಪ್. ಚಾಲನೆ ಸ್ಥಿತಿಯಲ್ಲಿಲ್ಲ | CNK 1991 | D808F 087594 | ಇಂಜಿನ್ ನಂಬರ್ ಕಂಡು ಬರುತ್ತಿಲ್ಲ |
| 11 | ಪೆಟಿಷನ್ ನಂ. 182/13 | 82/13 | ಹಸಿರು ಬಣ್ಣದ ಹಳೆಯ ಟಿವಿಎಸ್ ಎಕ್ಸ್‌ಎಲ್ 50 ಚಾಲನೆ ಸ್ಥಿತಿಯಲ್ಲಿಲ್ಲ | KA-01 R-7638 | ಛಾಸ್ಸಿ ನಂಬರ್ ಕಂಡು ಬರುತ್ತಿಲ್ಲ | ಇಂಜಿನ್ ನಂಬರ್ ಕಂಡು ಬರುತ್ತಿಲ್ಲ |
| 12 | ಪೆಟಿಷನ್ ನಂ. 183/13 | 83/13 | ಕೆಂಪು ಬಣ್ಣದ ಹಳೆಯ ಬಜಾಜ್ ಕವಾಸಕಿ. ಚಾಲನೆ ಸ್ಥಿತಿಯಲ್ಲಿಲ್ಲ | KA-15 E-2912 | C3001 062253 | E30DM 061760 |
| 13 | ಪೆಟಿಷನ್ ನಂ. 184/13 | 84/13 | ಮೆಟಾಲಿಕ್ ಗ್ರೇ ಬಣ್ಣದ ಬಜಾಜ್ ಪ್ಲಾಟಿನಂ | KA-02 EZ-4301 | MD2DDD ZZZPWA 09817 | DUMBPA 71846 |
| 14 | ಪೆಟಿಷನ್ ನಂ. 248/13 | 88/13 | ಸಿಲ್ವರ್ ಬಣ್ಣದ ಹೋಂಡಾ ಡಿಯೋ ಸ್ಕೂಟರ್. | KA-04 EU-456 | ME4JF 112K 78053243 | JF11E 6060649 |
| 15 | ಪೆಟಿಷನ್ ನಂ. 249/13 | 89/13 | ಬಿಳಿ ಬಣ್ಣದ ಹಳೆಯ ಕೈನೆಟಿಕ್ ಹೋಂಡಾ ಜಡ್‌ಎಕ್ಸ್ ಸ್ಕೂಟರ್. ಚಾಲನೆ ಸ್ಥಿತಿಯಲ್ಲಿಲ್ಲ | KA-02 EB-784 | NJFM 023862 | 0197471 ERM |
| 16 | ಪೆಟಿಷನ್ ನಂ. 250/13 | 90/13 | ನೀಲಿ ಬಣ್ಣದ ಹಳೆಯ ಕೈನೆಟಿಕ್ ಹೋಂಡಾ ಸ್ಕೂಟರ್. ಚಾಲನೆ ಸ್ಥಿತಿಯಲ್ಲಿಲ್ಲ | KA-03 K-2782 | ಛಾಸ್ಸಿ ನಂಬರ್ ಕಂಡು ಬರುತ್ತಿಲ್ಲ | 397902 NIEJL |
| 17 | ಪೆಟಿಷನ್ ನಂ. 251/13 | 91/13 | ಮಣ್ಣು ಬಣ್ಣದ ಹಳೆಯ ಕೈನೆಟಿಕ್ ಹೋಂಡಾ ಸ್ಕೂಟರ್. ಚಾಲನೆ ಸ್ಥಿತಿಯಲ್ಲಿಲ್ಲ | CKS 3066 | ಛಾಸ್ಸಿ ನಂಬರ್ ಕಂಡು ಬರುತ್ತಿಲ್ಲ | 081235 NIEE |
| 18 | ಪೆಟಿಷನ್ ನಂ. 252/13 | 92/13 | ಕಪ್ಪು ಬಣ್ಣದ ಹೋಂಡಾ ಆಕ್ಟೀವ ಸ್ಕೂಟರ್. | KA-05 EF-3061 | ME4JF 086H 18009681 | JF08E 0009739 |
| 19 | ಪೆಟಿಷನ್ ನಂ. 552/13 | 104/13 | ಕಪ್ಪು ರಾಯಲ್ ಎನ್‌ಫೀಲ್ಡ್ ಬುಲೆಟ್–350 ಮೋಟಾರ್ ಸೈಕಲ್ | ರಿಜಿಸ್ಟ್ರೇಷನ್ ನಂಬರ್ ಇರುವುದಲ್ಲ | 0B5197F | 0B5197F |

7ನೇ ಅಪರ ಮುಖ್ಯ ಮಹಾನಗರ
ದಂಡಾಧಿಕಾರಿಗಳು,
ಬೆಂಗಳೂರು ನಗರ.

PR. 668

*ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 507 ಎಲ್‌ಜಿಬಿ 2013 ಬೆಂಗಳೂರು,ದಿನಾಂಕ:29.09.2014**

**ನಮೂನೆ 29**

**68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ – ನಿಯಮ 96**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (5)ನೇ ಉಪ – ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪಪ್ರಕರಣದ ಮೇರೆಗೆ ಕರ್ನಾಟಕ ರಾಜ್ಯ ಪತ್ರದಲ್ಲಿ ಅಧಿಸೂಚನೆ ಸಂಖ್ಯೆ: ಎಲ್‌ಎನ್‌ಡಿ/ಸಿಆರ್:120/10–11 ದಿನಾಂಕ 08/12/2011 ರ ಮೂಲಕ ಪ್ರಕಟಿಸಲಾದ ಈ ಕೆಳಕಂಡ ಬಿ–ಖರಾಬು ಜಮೀನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂಬ ಕುರಿತಂತೆ ಜಿಲ್ಲಾಧಿಕಾರಿ, ಬೆಂಗಳೂರು ಜಿಲ್ಲೆ ರವರ ವರದಿ ಪರಿಶೀಲಿಸಿದ ತರುವಾಯ ಸದರಿ ಸರ್ಕಾರಿ ಬಿ–ಖರಾಬು ಜಮೀನಿನ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಸರ್ಕಾರ ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ಜಮೀನು ಇರುವ ಗ್ರಾಮ | ಉತ್ತರಹಳ್ಳಿ ಹೋಬಳಿ, ತುರಹಳ್ಳಿ ಗ್ರಾಮ |
| ತಾಲ್ಲೂಕು | ಬೆಂಗಳೂರು ದಕ್ಷಿಣ ತಾಲ್ಲೂಕು |
| ಜಿಲ್ಲೆ | ಬೆಂಗಳೂರು ಜಿಲ್ಲೆ |
| ಸರ್ವೆ ನಂಬರ್ | ಸ.ನಂ. 61/1 ರಲ್ಲಿ 0–05 ಗುಂಟೆ,<br>39/1 ರಲ್ಲಿ 0–03 ಗುಂಟೆ,<br>59/3 ರಲ್ಲಿ 0–01 ಗುಂಟೆ,<br>61/3 ರಲ್ಲಿ 0–01 ಗುಂಟೆ<br>– ಒಟ್ಟು 0.10 ಗುಂಟೆ ಬಿ–ಖರಾಬು ಜಮೀನು |
| ಸದರಿ ಭಾಗದ ವರ್ಣನೆ | ಕಾಲುದಾರಿ ಮತ್ತು ಕಲ್ಲುಮರಟಿ ಬಿ–ಖರಾಬ್ ಜಮೀನು |
| ಸರಿಸುಮಾರು ವಿಸ್ತೀರ್ಣ | ಒಟ್ಟು 0–10 ಗುಂಟೆ |

**ಮೇರೆಗಳು**

**ಸ.ನಂ.: 61/1 ರಲ್ಲಿ 0–05 ಗುಂಟೆ 'ಕಲ್ಲುಮರಟಿ' ಬಿ–ಖರಾಬಿಗೆ ಚಕ್ಕುಬಂದಿ**

ಪೂರ್ವಕ್ಕೆ: ಕೆ.ಪಿ.ಕಮಲಮ್ಮ ನವರ ಜಮೀನು

ಪಶ್ಚಿಮಕ್ಕೆ: ಬಿಡಿಎ ಬಡಾವಣೆ

ಉತ್ತರಕ್ಕೆ: ಬಿಡಿಎ ಬಡಾವಣೆ & ಕೆ.ಪಿ.ಕಮಲಮ್ಮ ನವರ ಜಮೀನು ಸ.ನಂ.60/2

ದಕ್ಷಿಣಕ್ಕೆ: ಸ.ನಂ.62/1 ಅರ್ಜಿದಾರರ ಜಮೀನು

**ಸ.ನಂ.: 39/1 ರಲ್ಲಿ 0–03 ಗುಂಟೆ 'ಕಾಲುದಾರಿ'ಗೆ ಚಕ್ಕುಬಂದಿ**

ಪೂರ್ವಕ್ಕೆ: ಸ.ನಂ.39/2 ಅರ್ಜಿದಾರರ ಜಮೀನು

ಪಶ್ಚಿಮಕ್ಕೆ: ಬಿಡಿಎ ಬಡಾವಣೆ

ಉತ್ತರಕ್ಕೆ: ಸ.ನಂ.62/1 ಅರ್ಜಿದಾರರ ಜಮೀನು

ದಕ್ಷಿಣಕ್ಕೆ: ಬಿಡಿಎ ಬಡಾವಣೆ

**ಸ.ನಂ.: 59/3 ರಲ್ಲಿ 0–01 ಗುಂಟೆ 'ಕಾಲುದಾರಿ'ಗೆ ಚಕ್ಕುಬಂದಿ**

ಪೂರ್ವಕ್ಕೆ: ಬಿಡಿಎ ಬಡಾವಣೆ

ಪಶ್ಚಿಮಕ್ಕೆ: ಸ.ನಂ.59/2 ಅರ್ಜಿದಾರರ ಜಮೀನು

ಉತ್ತರಕ್ಕೆ: ಬಿಡಿಎ ಬಡಾವಣೆ

ದಕ್ಷಿಣಕ್ಕೆ: ಬಿಡಿಎ ಬಡಾವಣೆ

| |
|---|
| **ಸ.ನಂ.: 61/3 ರಲ್ಲಿ 0–01 ಗುಂಟೆ 'ಕಾಲುದಾರಿ'ಗೆ ಚಕ್ಕುಬಂದಿ** |
| ಪೂರ್ವಕ್ಕೆ: ಬಿಡಿಎ ಬಡಾವಣೆ |
| ಪಶ್ಚಿಮಕ್ಕೆ: ಸ.ನಂ.61/2 ಅರ್ಜಿದಾರರ ಜಮೀನು |
| ಉತ್ತರಕ್ಕೆ: ಬಿಡಿಎ ಬಡಾವಣೆ |
| ದಕ್ಷಿಣಕ್ಕೆ: ಬಿಡಿಎ ಬಡಾವಣೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ–1)

**PR-702**

**SC-100**

## ಜಲ ಸಂಪನ್ಮೂಲ ಇಲಾಖೆ

### ಜ್ಞಾಪನಾ ಪತ್ರ

**ಸಂ: ಜಸಅ/ಇಎಸ್‌ಕ್ಯೂ–1/ವಾ.ಚಾ./ಅ.ಗೈ.ಹಾ./ದಂಡನೆ/2013–14/1350 ದಿನಾಂಕ: 31.07.2013.**

**ವಿಷಯ:** ಶ್ರೀ ಟಿ.ಆರ್. ಮುನಿರಾಜು, ವಾಹನ ಚಾಲಕರು, ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಕೃಷ್ಣಾ ಕೋಶ, ನವದೆಹಲಿ, ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಶಿಸ್ತು ಕ್ರಮ ಜರುಗಿಸುವ ಕುರಿತು.

**ಉಲ್ಲೇಖ:**
1. ಸರ್ಕಾರದ ಆದೇಶ ಸಂ: ಜಸಂಇ/307/ಸೇಇಸಿ/05, ಬೆಂಗಳೂರು, ದಿ:23.12.2005.
2. ಮುಖ್ಯ ಇಂಜಿನಿಯರ್, ಜ.ಸಂ.ಅ.ಸಂಸ್ಥೆ, ಬೆಂಗಳೂರು, ಇವರ ಜ್ಞಾಪನಾ ಪತ್ರ ಸಂ: ಜಸಅ/07/ಇಎಸ್‌ಎಂ/2010, ದಿನಾಂಕ: 30.11.2010.
3. ಈ ಕಛೇರಿ ಕಾರಣ ಕೇಳುವ ನೋಟೀಸ್ ಸಂ: ಜಸಅ/ಇಎಸ್‌ಕ್ಯೂ–1 ವಾ.ಚಾ./ಇ.ವಿ./2011–12 ದಿನಾಂಕ: 18.05.2012.
4. ಈ ಕಛೇರಿ ಜ್ಞಾಪನಾ ಪತ್ರ ಸಂ: ಜಸಅ/ಇಎಸ್‌ಕ್ಯೂ–1 ವಾ.ಚಾ./ಇ.ವಿ./2012–13, ದಿನಾಂಕ: 30.08.2012.
5. ವಿಚಾರಣಾಧಿಕಾರಿಗಳ ಪತ್ರ ದಿನಾಂಕ: 28.05.2013.
6. ಈ ಕಛೇರಿ 2ನೇ ಕಾರಣ ಕೇಳುವ ನೋಟೀಸ್ ಸಂ: ಜಸಅ/ಇಎಸ್‌ಕ್ಯೂ– ವಾ.ಚಾ./ಇ.ವಿ.ವ./ 2013–14, ದಿನಾಂಕ: 11.06.2013.
7. ಆಪಾದಿತರು ಸಲ್ಲಿಸಿರುವ ಲಿಖಿತ ಹೇಳಿಕೆ ದಿನಾಂಕ: 08.07.2013.

**ಪ್ರಸ್ತಾವನೆ:**

ಉಲ್ಲೇಖ (1) ರ ಸರ್ಕಾರಿ ಆದೇಶದಲ್ಲಿ ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆಯ ನವದೆಹಲಿಯ ಕೃಷ್ಣಾ ಜಲಕೋಶಕ್ಕೆ ಮೂರು ವಾಹನ ಚಾಲಕರ ಹುದ್ದೆಗಳನ್ನು ಸೃಜಿಸಲಾಗಿದೆ. ಈ ಹುದ್ದೆಗಳನ್ನು ಭರ್ತಿ ಮಾಡಲು ಅಧಿಸೂಚನೆ ಸಂ: ಜಸಂಅ/ಆರಿಇಸಿ/ವಾಚಾ/ನೇಮಕಾತಿ/06–07 ದಿ: 17.03.2007ರಲ್ಲಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಸದರಿ ಅಧಿಸೂಚನೆಗನುಗುಣವಾಗಿ ಶ್ರೀ ಟಿ.ಆರ್. ಮುನಿರಾಜು ಇವರು ಪರಿಶಿಷ್ಟ ಜಾತಿಗೆ ಮೀಸಲಿದ್ದ ವಾಹನ ಚಾಲಕರ ಹುದ್ದೆಗೆ ಆಯ್ಕೆಯಾಗಿ ಉಲ್ಲೇಖ (2) ರ ಈ ಕಛೇರಿ ಜ್ಞಾಪನ ಪತ್ರದಲ್ಲಿ ನವದೆಹಲಿಯ ಕೃಷ್ಣಾ ಜಲಕೋಶದ ವಾಹನ ಚಾಲಕರ ಹುದ್ದೆಗೆ ನೇಮಕಗೊಂಡು ದಿನಾಂಕ 06.12.2010 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಸದರಿಯವರು ದಿನಾಂಕ: 06.12.2010 ರಿಂದ 20.08.2011 ರವರೆಗೆ ಕರ್ತವ್ಯನಿರ್ವಹಿಸಿ 22.08.2011 ರಿಂದ 30.08.2011 ರವರೆಗೆ 9 ದಿನಗಳ ಗಳಿಕೆ ರಜೆಯನ್ನು ವೈಯಕ್ತಿಕ ಕಾರಣದ ಮೇರೆಗೆ ಮಂಜೂರು ಮಾಡಲು ರಜಾ ಅರ್ಜಿ ಸಲ್ಲಿಸಿ ರಜೆಯ ಮೇಲೆ ತೆರಳಿರುತ್ತಾರೆ. ನಂತರ ಅವರು ಕೋರಿದ ರಜಾ ಅವಧಿ ಮುಗಿದ ನಂತರ ಕರ್ತವ್ಯಕ್ಕೆ ಹಾಜರಾಗದೆ ಗೈರುಹಾಜರಾಗಿರುತ್ತಾರೆ.

ಸದರಿಯವರು ದಿನಾಂಕ: 06.12.2010 ರಿಂದ 2 ವರ್ಷಗಳ ಪರಿವೀಕ್ಷಣಾವಧಿಯಲ್ಲಿರುವಾಗ 06.12.2010 ರಿಂದ 20.08.2011 ರವರೆಗೆ ಕೇವಲ 8 ತಿಂಗಳು 16ದಿನಗಳು ಮಾತ್ರ ಕರ್ತವ್ಯನಿರ್ವಹಿಸಿದ್ದು, ಪರಿವೀಕ್ಷಣಾವಧಿಯನ್ನು ಪೂರ್ಣಗೊಳಿಸುವ ಪೂರ್ವದಲ್ಲಿಯೇ ಅನಧಿಕೃತ ಗೈರುಹಾಜರಾಗಿರುವುದರಿಂದ ಕೃಷ್ಣಾ ಜಲಕೋಶದ ದೈನಂದಿನ ಕೆಲಸಗಳಿಗೆ ತೊಂದರೆ ಉಂಟಾದ ಕಾರಣ ಉಲ್ಲೇಖ (3) ರಲ್ಲಿ ಈ ಕಛೇರಿಯಿಂದ ದಿನಾಂಕ: 18.05.2012ರಲ್ಲಿ ಕಾರಣ ಕೇಳುವ ನೋಟೀಸನ್ನು ದೋಷಾರೋಪಣ ಪಟ್ಟಿಯೊಂದಿಗೆ ಆಪಾದಿತರಿಗೆ ಜಾರಿ ಮಾಡಲಾಯಿತು.

ಆಪಾದಿತರು ತಮ್ಮ ಮೇಲಿನ ಆಪಾದನೆಗಳನ್ನು ಒಪ್ಪಿಕೊಳ್ಳದೆ ಇದ್ದುದರಿಂದ ಪ್ರಕರಣದ ಸತ್ಯಾಸತ್ಯತೆ ತಿಳಿಯುವ ಸಲುವಾಗಿ ಸಿ.ಸಿ.ಎ. ನಿಯಮ 11 ರ ಮೇರೆಗೆ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ, ಉಲ್ಲೇಖ (4) ರ ಈ ಕಛೇರಿ ಜ್ಞಾಪನಾ ಪತ್ರದಲ್ಲಿ ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಯಿತು. ವಿಚಾರಣಾಧಿಕಾರಿಗಳು ಸದರಿ ಪ್ರಕರಣದ ಬಗ್ಗೆ ಸಮಗ್ರವಾಗಿ ಇಲಾಖಾ ವಿಚಾರಣೆ ನಡೆಸಿ ಉಲ್ಲೇಖ (5) ರಲ್ಲಿ ವಿಚಾರಣಾ ವರದಿಯನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ.

ವಿಚಾರಣಾ ವರದಿಯನ್ನು ಅಮಲೋಕಿಸಿದಾಗ. ಅದರಲ್ಲಿ ವಿಚಾರಣಾಧಿಕಾರಿಗಳು **"ಆಪಾದಿತನ ಪ್ರತಿರಕ್ಷಾ ಹೇಳಿಕೆಯಲ್ಲಿ ಅಳವಡಿಸಿಕೊಂಡಿರುವ ಅಂಶಗಳು ಅಂಗೀಕಾರ್ಹವಲ್ಲವೆಂದು, ಆಪಾದಿತನು ಯಾವುದೇ ರೀತಿಯ ರಜೆಗೆ ಅರ್ಹನಲ್ಲವೆಂದು, ನವದೆಹಲಿಯಿಂದ ಬೆಂಗಳೂರಿಗೆ ವರ್ಗಾವಣೆ ಹೊಂದಲು ಪತ್ನಿಯ ಮೂಲಕ ಪ್ರಯತ್ನಿಸಿರುತ್ತಾನೆಂದು ತಿಳಿಸುತ್ತಾ, ಈ ಕೃತ್ಯಗಳು ಆಪಾದಿತನ ಅಶಿಸ್ತನ್ನು ಮತ್ತು ದುರ್ನಡತೆಯನ್ನು ತೋರಿಸಿರುತ್ತಾರೆಂದು ವರದಿ ಮಾಡುತ್ತಾ ಶಿಸ್ತು ಪ್ರಾಧಿಕಾರಿಯು ಆಪಾದಿತನ ಮೇಲೆ ಮಾಡಿದ ಆರೋಪಗಳು ಸಾಬೀತಾಗುತ್ತವೆಂದು ತಿಳಿಸಿರುತ್ತಾರೆ".**

ವಿಚಾರಣಾ ವರದಿಯಲ್ಲಿ ಆಪಾದಿತರ ಮೇಲಿನ ಅನಧಿಕೃತ ಗೈರುಹಾಜರಿ ಆರೋಪ ಸಾಬೀತಾಗಿದ್ದರಿಂದ ಆಪಾದಿತರಿಗೆ ಉಲ್ಲೇಖ (6) ರಲ್ಲಿ ವಿಚಾರಣಾ ವರದಿಯ ಪ್ರತಿಯೊಂದಿಗೆ 2ನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಯಿತು. ಸದರಿ ನೋಟೀಸಿಗೆ ಆಪಾದಿತರು ಉಲ್ಲೇಖ (7) ರಲ್ಲಿ ಲಿಖಿತ ಹೇಳಿಕೆಯನ್ನು ಈ ಕಛೇರಿಗೆ ಸಲ್ಲಿಸಿದ್ದು ಅದರಲ್ಲಿ ಯಾವ ಹೊಸ ಅಂಶಗಳನ್ನು ಹಾಗೂ ದಾಖಲೆಗಳನ್ನು ಪ್ರಸ್ತಾಪಿಸದೇ ಹಿಂದೆ ಇಲಾಖಾ ವಿಚಾರಣಾ ಪೂರ್ವದಲ್ಲಿ ಮತ್ತು ಸಮಯದಲ್ಲಿ ಪ್ರಸ್ತಾಪಿಸಲಾದ ಅಂಶಗಳೇ ಆಗಿರುತ್ತವೆ. ಅಲ್ಲದೇ ಆಪಾದಿತರು ಇದುವರೆವಿಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಅವರು ಈಗಲೂ ಸಹ ದೆಹಲಿಯಲ್ಲಿ ಕರ್ತವ್ಯಕ್ಕೆ ಹಾಜರಾಗುವ ಬಗ್ಗೆ ಇಚ್ಛೆ ವ್ಯಕ್ತಪಡಿಸಿರುವುದಿಲ್ಲ. ಆದ್ದರಿಂದ ಶ್ರೀ ಟಿ.ಆರ್. ಮುನಿರಾಜು, ವಾಹನ ಚಾಲಕರು, ಇವರ ಅನಧಿಕೃತ ಗೈರುಹಾಜರಿ ಸಂಬಂಧ ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು ಒಪ್ಪಿಕೊಂಡು ಸೂಕ್ತ ದಂಡನೆ ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

## ಆದೇಶ

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಟಿ.ಆರ್. ಮುನಿರಾಜು, ವಾಹನ ಚಾಲಕರು, ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಕೃಷ್ಣಾ ಕೋಶ, ನವದೆಹಲಿ, ಇವರು ದಿನಾಂಕ 22.08.2011 ರಿಂದ ಈವರೆಗೆ ಕರ್ತವ್ಯಕ್ಕೆ ಹಾಜರಾಗದೇ ಅನಧಿಕೃತ ಗೈರು ಹಾಜರಾಗಿರುವುದು ಸಾಬೀತಾಗಿರುವುದರಿಂದ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಒಪ್ಪಿಕೊಂಡು, ಕೆ.ಸಿ.ಎಸ್ (ಸಿ.ಸಿ.ಎ.) **ನಿಯಮಗಳು 1957ರ ನಿಯಮ 8 (vii) ರ ಅನ್ವಯ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ "ಮುಂದಿನ ಉದ್ಯೋಗಕ್ಕೆ ಅನರ್ಹತೆಯಾಗದ ಹಾಗೆ ಸೇವೆಯಿಂದ ತೆಗೆದು ಹಾಕುವ ದಂಡನೆ"**ಯನ್ನು ವಿಧಿಸಲಾಗಿದೆ.

**ಜಿ. ಗುರುಪ್ರಸಾದ್**
ಶಿಸ್ತು ಪ್ರಾಧಿಕಾರಿ ಹಾಗೂ ಮುಖ್ಯ ಇಂಜಿನಿಯರ್,
ಜ.ಸಂ.ಅ.ಸಂಸ್ಥೆ., ಬೆಂಗಳೂರು–9

PR-587
SC - 05

## ಜಲ ಸಂಪನ್ಮೂಲ ಇಲಾಖೆ

### ಜ್ಞಾಪನಾ ಪತ್ರ

**ಸಂಖ್ಯೆ: ಜಸಂಅಸಂ/ಇಎಸ್‌ಕ್ಯೂ–1/ದ್ವಿ.ದ.ಸ./ಸ.ಸೇ.ವಜಾ./2013–14/1048 ದಿನಾಂಕ: 06.07.2013.**

**ವಿಷಯ:** ಶ್ರೀ ಸಚ್ಚಿದಾನಂದಮೂರ್ತಿ, ದ್ವಿ.ದ.ಸ. ಜ.ಸಂ.ಅ.ಸಂಸ್ಥೆ, (ಜಿಯೋಮ್ಯಾಟಿಕ್ ಕೇಂದ್ರ), ಬೆಂಗಳೂರು, ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ಶಿಸ್ತು ಕ್ರಮ ಜರುಗಿಸುವ ಕುರಿತು.

**ಉಲ್ಲೇಖ:**
1) ನಿರ್ದೇಶಕರು, ಜಿಯೋಮ್ಯಾಟಿಕ್ ಕೇಂದ್ರ, ಜ.ಸಂ.ಅ.ಸಂಸ್ಥೆ, ಬೆಂಗಳೂರು ಇವರ ಆಂತರಿಕಟಿಪ್ಪಣಿ ಸಂ: ಮುಇಂ/ಜಸಂಅಸಂ/ಜಿ.ಕೇಂ./ಸಿಬ್ಬಂದಿ/ರಜೆ/ 2011–12/1412,ದಿ: 23.11.2011.
2) ಈ ಕಛೇರಿಯಿಂದ ಜಾರಿ ಮಾಡಲಾದ ಕಾ.ಕೇ.ನೋಟೀಸ್ ಸಂ: ಜಸಅ/ಇಎಸ್‌ಕ್ಯೂ–1/ದ್ವಿದಸ/ಇ.ವಿ./11–12, ದಿ: 26.04.2012.
3) ಆಪಾದಿತರ ಲಿಖಿತ ಹೇಳಿಕೆ ದಿ: 21.05.2012.
4) ಈ ಕಛೇರಿ ಜ್ಞಾಪನಾ ಪತ್ರ ಸಂ: ಜಸಅ/ಇಎಸ್‌ಕ್ಯೂ–1/ದ್ವಿ.ದ.ಸ./ಇ.ವಿ./2012–13, ದಿ: 09.08.2012 ಹಾಗೂ ತಿದ್ದುಪಡಿ ಆದೇಶ ದಿ: 12.10.2012
5) ವಿಚಾರಣಾಧಿಕಾರಿಗಳ ಪತ್ರ ಸಂ: ಅಅ/ಮಾ ಮತ್ತು ಇ/ಕಾಇಂ–1/ಇಲಾಖಾ ವಿಚಾರಣಾ ವರದಿ/12–13/784, ದಿ: 01.03.2013.
6) ಈ ಕಛೇರಿಯಿಂದ ಜಾರಿ ಮಾಡಲಾದ 2ನೇ ಕಾ.ಕೇ.ನೋಟೀಸ್ ಸಂ :ಜಸಅ/ಇಎಸ್‌ಕ್ಯೂ–1/ದ್ವಿದಸ/ಇ.ವಿ.ವ/2012–13, ದಿ: 25.03.2013.

**ಪ್ರಸ್ತಾವನೆ**

ಶ್ರೀ ಸಚ್ಚಿದಾನಂದಮೂರ್ತಿ, ದ್ವಿ.ದ.ಸ. ಜ.ಸಂ.ಅ.ಸಂಸ್ಥೆ (ಜಿಯೋಮ್ಯಾಟಿಕ್ ಕೇಂದ್ರ) ಬೆಂಗಳೂರು, ಇವರು ದಿ: 05.07.2011 ರಲ್ಲಿ ಅರ್ಜಿ ಸಲ್ಲಿಸಿ ಅದರಲ್ಲಿ ದಿ: 05.07.2011 ರಿಂದ 08.07.2011 ರವರೆಗೆ ವೈಯಕ್ತಿಕ ಕಾರಣಕ್ಕಾಗಿ 4 ದಿನಗಳ ಪರಿವರ್ತಿತ ರಜೆಯನ್ನು ಮಂಜೂರು ಮಾಡುವಂತೆ ಕೋರಿ ರಜೆಯ ಮೇಲೆ ತೆರಳಿದವರು ರಜೆಯ ಅವಧಿ ಮುಗಿದ ನಂತರವೂ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುತ್ತಾರೆ. ಈ ಬಗ್ಗೆ ಕಛೇರಿಯಿಂದ ಕೂಡಲೇ ಕರ್ತವ್ಯಕ್ಕೆ ಹಾಜರಾಗುವಂತೆ ಹಲವಾರು ಮೆಮೋಗಳನ್ನು ದಾಖಲೆಗಳಲ್ಲಿ ಲಭ್ಯವಿರುವ ಅವರ ವಾಸದ ವಿಳಾಸಗಳಿಗೆ ನೋಂದಣಿ ಅಂಚೆ ಮುಖಾಂತರ ಕಳುಹಿಸಲಾಯಿತು. ಆದರೆ ಸದರಿ ನೋಟೀಸ್‌ಗಳು "No such person in the address hence returned", "ಅನ್‌ಕ್ಲೈಮ್ಡ್" ಎಂಬ ಷರಾದೊಂದಿಗೆ ಕಛೇರಿಗೆ ವಾಪಸ್ ಬಂದಿರುತ್ತದೆ. ತದನಂತರ ಉಲ್ಲೇಖ (2) ರಲ್ಲಿ, ಕೆ.ಸಿ.ಎಸ್. (ಸಿ.ಸಿ.ಎ.) ನಿಯಮಾವಳಿಗಳ ಪ್ರಕಾರ ದೋಷಾರೋಪಣ ಪಟ್ಟಿ ಅನುಬಂಧ 1 ರಿಂದ 4 ರೊಂದಿಗೆ ಕಾರಣ ಕೇಳುವ ನೋಟೀಸ್ ಹೊರಡಿಸಿ ಸದರಿ ವಿಳಾಸಗಳಿಗೆ ನೋಂದಣಿ ಅಂಚೆ ಮುಖಾಂತರ ರವಾನಿಸಲಾಯಿತು. ಅದೂ ಸಹ ಮೇಲ್ಕಂಡ ಷರಾದೊಂದಿಗೆ ವಾಪಸ್ ಬಂದಿರುತ್ತದೆ. ತದನಂತರ ಅಪಾದಿತರು ದಿ: 09.05.2012 ರಲ್ಲಿ ಕಛೇರಿಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡ ಪ್ರಯುಕ್ತ ಅದೇ ದಿನ ಸದರಿ ಕಾರಣ ಕೇಳುವ ನೋಟೀಸನ್ನು ಆಪಾದಿತರಿಗೆ ಜಾರಿ ಮಾಡಲಾಗಿದೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಉಲ್ಲೇಖ (3) ರಲ್ಲಿ ಆಪಾದಿತರು ಸದರಿ ಕಾರಣ ಕೇಳುವ ನೋಟೀಸಿಗೆ ಲಿಖಿತ ಹೇಳಿಕೆಯನ್ನು ಸಲ್ಲಿಸಿದ್ದು, ಅದರಲ್ಲಿ ಅವರು ನೀಡಿರುವ ಕಾರಣವು ತೃಪ್ತಿಕರ ಹಾಗೂ ಸಮಂಜಸವೆನಿಸದೇ ಇರುವುದರಿಂದ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಕೆ.ಸಿ.ಎಸ್.(ಸಿಸಿಎ) ನಿಯಮ 11ರ ಅನುಸಾರ ಇಲಾಖಾ ವಿಚಾರಣೆ ನಡೆಸಲು ಉದ್ದೇಶಿಸಿ, ಉಲ್ಲೇಖ (4)ರ ಈ ಕಛೇರಿ ಜ್ಞಾಪನಾ ಪತ್ರದಲ್ಲಿ ಶ್ರೀ ಹೆಚ್.ಎಸ್. ಮೋಹನ್, ಕಾರ್ಯಪಾಲಕ ಇಂಜಿನಿಯರ್, ಉಸ್ತುವಾರಿ ಮತ್ತು ಮೌಲ್ಯಮಾಪನ, ಬಸವ ಭವನ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಗಳನ್ನಾಗಿ, ಶ್ರೀ ಗಂಗಯ್ಯ, ನಿಬಂಧಕರು, ಹೈಡ್ರಾಲಜಿ ಮತ್ತು ಕೇಂದ್ರ ಯಾಂತ್ರಿಕ ಸಂಸ್ಥೆ, ಬೆಂಗಳೂರು, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ವಿಚಾರಣಾಧಿಕಾರಿಗಳು ಪ್ರಕರಣದ ಸಮಗ್ರ ವಿಚಾರಣೆ ನಡೆಸಿ ಉಲ್ಲೇಖ (5) ರಲ್ಲಿ ವಿಚಾರಣಾ ವರದಿಯನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ.

ವಿಚಾರಣಾ ವರದಿಯನ್ನು ಅವಲೋಕಿಸಿದಾಗ, ಶಿಸ್ತು ಪ್ರಾಧಿಕಾರದ ಪರವಾಗಿ ಮಂಡನಾಧಿಕಾರಿಗಳು ಮಂಡಿಸಿದ ದಾಖಲೆಗಳು, ಸಾಕ್ಷಿದಾರರ ಹೇಳಿಕೆ ಹಾಗೂ ಆಪಾದಿತರ ಹೇಳಿಕೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಆಪಾದಿತರಾದ ಶ್ರೀ ಸಚ್ಚಿದಾನಂದಮೂರ್ತಿ, ದ್ವಿ.ದ.ಸ. ಇವರು ದಿ: 05.07.2011 ರಿಂದ 08.07.2011 ರವರೆಗೆ ವೈಯಕ್ತಿಕ ಕಾರಣಗಳಿಗೆ ಪರಿವರ್ತಿತ ರಜೆ ಹಾಕಿ, ತದನಂತರ ದಿ: 08.05.2012 ರವರೆಗೆ ಕಛೇರಿ ಕೆಲಸಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವ ಆಪಾದನೆಯು ಸಾಬೀತಾಗಿದೆ ಎಂದು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯಲ್ಲಿ ನಮೂದಿಸಿರುತ್ತಾರೆ. ಸದರಿಯವರು ದಿ: 09.05.2012 ರಿಂದ 26.09.2012 ರವರೆಗೆ ಕಾರ್ಯನಿರ್ವಹಿಸಿ ದಿ: 27.09.2012 ರಿಂದ ಈವರೆಗೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಇವರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರಿಯಲು ಆಸಕ್ತಿ ಇಲ್ಲದೆ ಅನಧಿಕೃತ ಗೈರುಹಾಜರಾಗಿ ದುರ್ನಡತೆ ಎಸಗಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ.

ವಿಚಾರಣಾ ವರದಿಯಲ್ಲಿ ಆಪಾದಿತರ ಮೇಲಿನ ಅನಧಿಕೃತ ಗೈರುಹಾಜರಿ ಆರೋಪ ಸಾಬೀತಾಗಿದ್ದರಿಂದ ಆಪಾದಿತರಿಗೆ ಉಲ್ಲೇಖ (6) ರಲ್ಲಿ ವಿಚಾರಣಾ ವರದಿಯ ಪ್ರತಿಯೊಂದಿಗೆ 2ನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ನೋಂದಣಿ ಅಂಚೆ ಮೂಲಕ ಕಳುಹಿಸಲಾಯಿತು. ಸದರಿ ನೋಟೀಸಿಗೆ ಆಪಾದಿತರು ನಿಗದಿತ ಅವಧಿಯಲ್ಲಿ ಯಾವುದೇ ಹೇಳಿಕೆಗಳನ್ನು ನೀಡಿರುವುದಿಲ್ಲ ಹಾಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಆದ್ದರಿಂದ, ಶ್ರೀ ಸಚ್ಚಿದಾನಂದಮೂರ್ತಿ, ದ್ವಿ.ದ.ಸ., ಇವರ ಅನಧಿಕೃತ ಗೈರುಹಾಜರಿ ಸಂಬಂಧ ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು ಒಪ್ಪಿಕೊಂಡು ಕೆ.ಸಿ.ಎಸ್.(ಸಿಸಿಎ) ನಿಯಮಾವಳಿಗಳು 1957 ರ ಪ್ರಕಾರ ಸೂಕ್ತ ದಂಡನೆ ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಸಚ್ಚಿದಾನಂದಮೂರ್ತಿ, ದ್ವಿ.ದ.ಸ.ಜ.ಸಂ.ಅ.ಸಂಸ್ಥೆ (ಜಿಯೋಮ್ಯಾಟಿಕ್ ಕೇಂದ್ರ) ಬೆಂಗಳೂರು, ಇವರು ದಿ: 05.07.2011 ರಿಂದ 08.07.02011 ರವರೆಗೆ ಮತ್ತು 27.09.2012 ರಿಂದ ಈವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವುದು ಸಾಬೀತಾಗಿರುವುದರಿಂದ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯನ್ನು ಒಪ್ಪಿಕೊಂಡು, ಕೆ.ಸಿ.ಎಸ್. (ಸಿ.ಸಿ.ಎ.) **ನಿಯಮಗಳು 1957ರ ನಿಯಮ 8(viii)ರ ಅನ್ವಯ ಸದರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ "ಸಾಮಾನ್ಯವಾಗಿ ಮುಂದಿನ ಉದ್ಯೋಗಕ್ಕೆ ಅನರ್ಹತೆಯಾಗತಕ್ಕ ರೀತಿಯಲ್ಲಿ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆ"**ಯನ್ನು ವಿಧಿಸಲಾಗಿದೆ.

**ಜಿ. ಗುರುಪ್ರಸಾದ್**
ಶಿಸ್ತು ಪ್ರಾಧಿಕಾರಿ ಹಾಗೂ ಮುಖ್ಯ ಇಂಜಿನಿಯರ್,
ಜ.ಸಂ.ಅ.ಸಂಸ್ಥೆ., ಬೆಂಗಳೂರು–9

**PR-588**
**SC - 05**

*ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59